**KAVITHEGONDU KATHE — Collection of Poetic stories collected & compelled by R. Ganesh, published by Mythri Prakashana, No. 330, 'Aruna', 15th Main Banashankari 1st Stage, Bangalore-560 050.**



ಪುಟಗಳು : 161 ಬೆಲೆ : ರೂ. **35-00**

ಪ್ರಥಮ ಮುದ್ರಣ : 1996

ಪ್ರಕಾಶಕರು : ಮೈತ್ರಿಪ್ರಕಾಶನ, ನಂ. 330. ಅರುಣ, ಬನಶಂಕರಿ 1ನೇ ಹಂತ, ಬೆಂಗಳೂರು-560 050, ದೂರವಾಣಿ 629552. ಮುದ್ರಕರು ಚಂದನ ಪ್ರಿಂಟರ್ಸ್, ನಂ. 685, ರಾಮಾಂಜನೇಯ ರಸ್ತೆ, ಶ್ರೀನಗರ, ಬೆಂಗಳೂರು-560 050, ದೂರವಾಣಿ : 602633

# ಕೃತಜ್ಞತೆಗಳು ;


- ಅಪರೂಪದ ಕಥೆಗಳನ್ನು ಹುಡುಕಿ, ಬರೆದುಕೊಟ್ಟ ಅವಿಳಂಬ ಸರಸ್ವತಿಯವರಿಗೆ
- ಚಂದನ ಪ್ರಿಂಟರ್ಸ್‌ನ ಹೆಚ್. ವಿ. ಶ್ರೀನಿವಾಸಮೂರ್ತಿಯವರಿಗೆ
- ಮುಖಪುಟ ಚಿತ್ರಿಸಿದ ಯು. ಡಿ. ಸುರೇಶ್‌ರವರಿಗೆ
- ಪುಸ್ತಕ ಕೊಂಡು ಓದುತ್ತಿರುವ ನಿಮಗೆ

ಎಂ. ಎ. ದಯಾಶಂಕರ
ಪ್ರಕಾಶಕ

॥ ಶ್ರೀಃ ॥

# ಪ್ರಾಸ್ತಾವಿಕ

ರಮಣೀಯಾರ್ಥ ಪ್ರತಿಪಾದಕವಾದ ರಚನಾ ವಿಶೇಷವೇ ಕವಿತೆ. ಇದು ಸರಸ ಭಾವಬಂಧುರವೂ, ವೈದಗ್ಧ್ಯ ಭಂಗಿಯ ಭಣಿತಿಯೂ ಆಗಿರುತ್ತದೆಂಬುದನ್ನು ಹೇಳಲೇಬೇಕಿಲ್ಲ. ವಿಶೇಷತಃ ಪೂರ್ವಾಪರ ವಿವರಣ ನಿರಪೇಕ್ಷವಾದ ಮುಕ್ತಕಗಳು ಶುದ್ಧಕವಿತೆಯ ಪರಾಕಾಷ್ಠೆಯೆಂದು ರಸಿಕರ ಅಭಿಮತ. ಆದರೆ ಕೆಲವೊಮ್ಮೆ ಪ್ರಸಂಗಶುದ್ಧಿಯಿಂದಾಗಿ ಮೇಲಣ ಪರಮೋಚ್ಚಗುಣಗಳೆಲ್ಲವೂ ಪರಿಪೂರ್ಣವಾಗಿ ಪದ್ಯವೊಂದರಲ್ಲಿ ತುಂಬಿರದಿದ್ದರೂ, ಅದು ಆಹ್ಲಾದವನ್ನೂ, ಆನಂದವನ್ನೂ ಬಿಂಬಿಸುತ್ತದೆ. ಆದುದರಿಂದಲೇ 'ಅವಸರಪಠಿತಾ ವಾಣೀ ಗುಣಗಣರಹಿತಾಽಪಿ ಶೋಭತೇ' ಎಂದು ಹೇಳುತ್ತಾರೆ. ಯಾವುದೇ ಕವಿತೆಯಾಗಲಿ (ಅದು ಮುಕ್ತಕಪ್ರಾಯವೇ ಆಗಿದ್ದರೂ) ತಕ್ಕ ಪರಿವೇಷವನ್ನು ಹೊಂದಿಲ್ಲದಿದ್ದರೆ ತನ್ನ ಸಂಪೂರ್ಣ ಸೌಂದರ್ಯವನ್ನು ವ್ಯಂಜಿಸುವುದಿಲ್ಲ. ಎಂಥ ಸ್ವತಂತ್ರಕವಿತೆಯ, ಸರಳ ಕಾವ್ಯದ, ಸಾರ್ವತ್ರಿಕ ಸಾಹಿತ್ಯಖಂಡದ ಸ್ವಾರಸ್ಯವಾಗಲಿ ಸಮುಚಿತ ಪೂರ್ವ ಸಂಸ್ಕಾರವಿಲ್ಲದ ಶ್ರೋತೃಗಳಲ್ಲಿ ಸಾರ್ಥಕ್ಯದ ಗರಿಷ್ಠಮಿತಿಯನ್ನು ಸೇರದು. ಈ ಬಗೆಯ ಪೂರ್ವಭಿತ್ತಿಯೇ ಸಹೃದಯತ್ವದ ಮೊದಲ ಗುಣ. ಇಂಥ ಭೂಮಿಕೆಯನ್ನು ಕವಿಯೇ ಕೆಲವೊಮ್ಮೆ ತನ್ನ ಕವಿತಾ ಶ್ರೋತೃಗಳಿಗಾಗಿ ಮಾಡಿಕೊಡುತ್ತಾನೆ. (ಇದು ಮುಕ್ತಕೇತರ ಕಾವ್ಯಗಳಲ್ಲಿ ಮಾತ್ರ ಸಾಧ್ಯ. ಉದಾಹರಣೆಗೆ ನಾಟಕಗಳ ಪ್ರಸ್ತಾವನೆಗಳು, ಕಾವ್ಯಗಳ ಪೀಠಿಕಾ ಪ್ರಸಂಗಗಳು ಇತ್ಯಾದಿ. ಇಲ್ಲವಾದರೆ ವರ್ಣನೀಯ ವಿಷಯದಲ್ಲಿ ತನ್ಮಯೀಭವನ ಶಕ್ತಿಯು

ಸಹೃದಯರಿಗೆ ಸ್ವಲ್ಪ ಕಷ್ಟವಾಗುತ್ತದೆ.) ಇನ್ನು ಕೆಲವೊಮ್ಮೆ ರಸಜ್ಞನಾದ ವ್ಯಾಖ್ಯಾನಕಾರನು ಕವಿಯ ಸಂದರ್ಭಶುದ್ಧವೂ, ಚಮತ್ಕಾರ ಚಿತ್ರಿತವೂ ಆದ ಕವಿತೆಯನ್ನು ಸಮುಚಿತ ಪೂರ್ವಾಪರ ವಿವರಣೆಗಳಿಂದ ಸಹೃದಯರಿಗೆ ಮತ್ತಷ್ಟು ಹತ್ತಿರವಾಗಿಸುತ್ತಾನೆ. (ಇಂಥ ಪ್ರಕ್ರಿಯೆಯನ್ನು ಗಾಥಾಸಪ್ತಶತೀ, ಆರ್ಯಾಸಪ್ತಶತೀ, ವಜ್ಜಾಲಗ್ಗವೇ ಮೊದಲಾದ ಮುಕ್ತಕ ಸಂಕಲನಗಳ ವ್ಯಾಖ್ಯಾನಗಳಲ್ಲಿ ಕಾಣಬಹುದು.) ಅಂತೂ ಒಟ್ಟಿನಲ್ಲಿ ಪ್ರಸಂಗಾವಧಾನವಿಲ್ಲದಿದ್ದ ಪಕ್ಷದಲ್ಲಿ ಸ್ವಾರಸ್ಯಲೋಪವಾಗುತ್ತಿತ್ತೆನ್ನಬಹುದಾದ ಮುಕ್ತಕಪ್ರಾಯ ಕವಿತೆಗಳಿಗೆ ರುಚಿಪೋಷಕವಾಗಿ ಟಿಪ್ಪಣಿಗಳನ್ನು ರಚಿಸುವುದು ಸ್ವಾಗತಾರ್ಹವೆಂದೇ ರಸಿಕರ ಭಾವನೆ. ಪ್ರಕೃತ ಪ್ರಯತ್ನವೂ ಸಹ ಇದೇ ಜಾಡಿನದಾಗಿದೆಯೆಂಬುದು ಲೇಖಕನ ನಿವೇದನೆ.

ಭಾರತೀಯರಿಗೆ ಇತಿಹಾಸ ಪ್ರಜ್ಞೆ ಇಲ್ಲವೆಂಬ ಪ್ರಥೆ ಜನಜನಿತವಾಗಿದೆಯಷ್ಟೆ. ಇದರ ಯುಕ್ತಾಯುಕ್ತತೆಗಳನ್ನು ಚರ್ಚಿಸದೆ ಗೃಹೀತವಾಗಿ ನಾವು ಸಾಗಿದಾಗ ಪಾಶ್ಚಾತ್ಯರಿಗೆ ಈ ದಿಶೆಯಲ್ಲಿರುವ ಸಮಸ್ತ ವಿವರ-ವಿಶೇಷ ಸಂಶೋಧನಾಸಕ್ತಿಯಾಗಲಿ, ಸಕಲಾಂಶಸಂಗ್ರಹಣಾಸ್ಥೆಯಾಗಲಿ ನಮ್ಮಲ್ಲಿ ಕಂಡುಬರುವುದಿಲ್ಲವೆಂಬುದನ್ನು ಒಪ್ಪಬೇಕು. ವಿಶೇಷತಃ ಅಲ್ಲಿಯ ಕವಿ-ಪಂಡಿತರ, ಕಲಾವಂತರ, ಪ್ರಮುಖ ವ್ಯಕ್ತಿಗಳ ಜೀವನಗಳನ್ನು ಅತ್ಯಂತ ವಿಶದವಾಗಿ; ಎಲ್ಲ ಘಟನೆಗಳನ್ನೂ ದೇಶ-ಕಾಲಗಳ ವ್ಯವಸ್ಥಿತ ಸಂಬಂಧಗಳೊಡನೆ ಸಾಧಾರವಾಗಿ ನಿರೂಪಿಸುವ ಪ್ರಾಮಾಣಿಕ ಪ್ರಯತ್ನಗಳು ಅನೇಕ ವರ್ಷಗಳಿಂದಲೂ ಅವಿಚ್ಛಿನ್ನವಾಗಿ ಬೆಳೆದು ಬಂದಿವೆ. ನಮ್ಮಲ್ಲಿ ಇಂಥ ಕೆಲಸಗಳು ಮೊದಲಿನಿಂದಲೂ ಸಾಗಿಬಂದಿಲ್ಲವೆಂಬುದು ಸತ್ಯವೆಂದ ಮಾತ್ರಕ್ಕೇ ಇತಿಹಾಸಪ್ರಜ್ಞಾರಾಹಿತ್ಯವೆಂಬ ನಿರ್ಣಯಕ್ಕೆ ಹಾರಬೇಕಿಲ್ಲ. ಸರಿಯೇ ; ಆದರೆ ಭಾರತೀಯರ ಐತಿಹಾಸಿಕದೃಷ್ಟಿ ಕಿಂಚಿತ್ ಭಿನ್ನವಾದದ್ದೆಂಬುದನ್ನು ಮರೆಯಬಾರದು. ನಮ್ಮಲ್ಲಿ ಸಾಪೇಕ್ಷವಾದ ದೇಶ-ಕಾಲ-ವಸ್ತುಗಳಿಗಿಂತಲೂ ತದಂತರ್ಗತವೂ, ಹೆಚ್ಚು ನಿರಪೇಕ್ಷವೂ ಆದ ಶೀಲ-ಸ್ವಭಾವ-ಮೌಲ್ಯಗಳಿಗೆ ಬೆಲೆ ಮತ್ತು ಆಸ್ಥೆ. ಹೀಗಾಗಿಯೇ ಕವಿಯೊಬ್ಬ ಎಲ್ಲಿಯವನು, ಯಾವ ಕಾಲದವನು ಎಂಬ ಪ್ರಶ್ನೆಗಳಿಗಿಂತಲೂ ಅವನ ಕಾವ್ಯವೆಂಥದ್ದೆಂಬ ಮಾತೇ ತುಂಬ

ಜಿಜ್ಞಾಸಾಸ್ಪದವಾಯಿತು. ಹಾಗೆಂದು ಆತನ ಜೀವಿತದ ಬಗೆಗಾಗಲಿ, ಮನೋಭಾವವನ್ನು ಕುರಿತಾಗಲಿ ದಿವ್ಯನಿರ್ಲಕ್ಷ್ಯ ಸಂದಿತೆಂದು ಪೂರ್ಣವಾಗಿ ಹೇಳುವಂತಿಲ್ಲ. ವಿಶೇಷತಃ ಸಂಸ್ಕೃತ ಕವಿಗಳಿಗೆ ಸಂಬಂಧಿಸಿದಂತೆ ಸಾವಿರಾರು ಪದ್ಯಗಳು (ಇವುಗಳನ್ನು ಚಾಟುಪದ್ಯಗಳ* ಒಂದು ಪ್ರಭೇದಕ್ಕೂ ಸೇರಿಸ ಬಹುದು.) ದೊರೆಯುತ್ತವೆ. ಇವುಗಳು ಆಯಾ ಕವಿಗಳ ಜೀವಿತ ಕಾಲದಲ್ಲಿ ನಡೆದಿರಬಹುದಾದ ಸ್ವಾರಸ್ಯಕರ ಘಟನೆಗಳ ದಾಖಲೆಗಳಾಗಿಯೋ, ಸಂವೇದನೆಗಳಾಗಿಯೋ, ಪ್ರತಿಕ್ರಿಯೆಗಳಾಗಿಯೋ ಇರುವುದುಂಟು. ಕವಿಗಳ ವಿದ್ಯಾಮದ, ವಿನಯಶೀಲತೆ, ಮಾನೋನ್ನತಿ, ಆರ್ತಿ, ಆನಂದಗಳೇ ಮೊದಲಾದ ನಾನಾಮುಖಗಳ ಕನ್ನಡಿಗಳಾಗಿಯೂ ಇರುವುದುಂಟು. (ಕೆಲವೊಮ್ಮೆ ಯಾರಿಂದಲೋ ಕಲ್ಪಿತವಾಗಿ ಕವಿಯೊಬ್ಬನಿಗೆ ಎಣೆಯಿಲ್ಲದ ಮೆಚ್ಚುಗೆಯನ್ನೋ, ತಿರಸ್ಕಾರವನ್ನೋ ತೋರಿಸಲೆಂದು ಕೃತಕ ಘಟನೆಗಳನ್ನು ಅವಲಂಬಿಸಿದ ರಚನೆಗಳಿರುವುದೂ ಉಂಟು. ಇವುಗಳ ಪ್ರಸಕ್ತಿ ಮುಂದೆ ಬರುತ್ತದೆ.) ಇಷ್ಟು ಮಾತ್ರವಲ್ಲದೆ ಕೆಲವೊಮ್ಮೆ ಕವಿ-ಕಲಾವಿದರ ಜೀವಿತಗಳನ್ನು ಆಶ್ರಯಿಸದೆ ಐತಿಹಾಸಿಕ ವ್ಯಕ್ತಿ-ವಿಶೇಷ ನಿರಪೇಕ್ಷೆಯಾಗಿ ಸಾರ್ವತ್ರಿಕ ನೀತಿಯನ್ನೋ, ಲೋಕಸಂಗ್ರಹವಿಧಿಯನ್ನೋ ಚಮತ್ಕಾರ ಪೂರ್ಣವಾದ ಘಟನೆಯ ಹಿನ್ನೆಲೆಯಲ್ಲಿ ನಿರೂಪಿಸಿರುವ ನಿದರ್ಶನಗಳೂ ನೂರಾರು. ಒಟ್ಟಾರೆ ಪ್ರಕೃತ ತಾತ್ಪರ್ಯವಿಷ್ಟು ; ಸಂಸ್ಕೃತದಲ್ಲಿ ಸಂದರ್ಭ ಶುದ್ಧಿಯಿಂದಾಗಿ ಹೆಚ್ಚು ರಂಜಿಸುವ, ಸ್ವಯಂ ಸುಂದರಾಭಿವ್ಯಕ್ತಿಯೂ ಇರುವ ಸಾವಿರಾರು ರಚನೆಗಳು ಪ್ರಸಿದ್ಧ ವ್ಯಕ್ತಿಗಳ, ಕವಿ-ಪಂಡಿತ-ಕಲಾವಿದರ, ಲೋಕ ವೈಚಿತ್ರ್ಯದ, ಸ್ವಭಾವದ್ಯೋತಕವಾಗಿ ತಕ್ಕ ಮಟ್ಟಿಗೆ ಇತಿಹಾಸ ಪ್ರಜ್ಞೆಯೂ ಮಿಳಿತವಾಗಿರುವಂತೆ ಕಾಣಸಿಗುತ್ತವೆ. (ಇಲ್ಲಿಯ ಐತಿಹಾಸಿಕ ವಿಚಾರವು ಹೆಚ್ಚಾಗಿ ತಾತ್ತ್ವಿಕವಾದದ್ದೆಂಬುದನ್ನು ನಾವು ಮರೆಯುವಂತಿಲ್ಲ.) ಅಲ್ಲದೆ ಇಂಥ ರಚನೆಗಳು ಯಾವುದೇ ಗ್ರಂಥದ ಭಾಗಗಳಾಗಿ ಹೆಚ್ಚಾಗಿ

---

* 'ಚಾಟು' ಎಂದರೆ ಚಮತ್ಕಾರ ಜನಕವಾದ ಉಕ್ತಿಸೌಂದರ್ಯವನ್ನುಳ್ಳ ಬರವಣಿಗೆ ಎಂದು ತಾತ್ಪರ್ಯ.

ಕಾಣಸಿಗದೆ ಪ್ರಮುಖವಾಗಿ ವ್ಯಸ್ತರೂಪದಲ್ಲಿಯೇ ಮೌಖಿಕಪರಂಪರೆಯಲ್ಲಿ ಉಳಿದು ಬಂದಿವೆಯೆಂಬುದು ಗಮನಾರ್ಹ.

ಈ ಬಗೆಯಲ್ಲಿ ರೂಪಿತವಾಗಿರುವ ಕವಿ-ಪಂಡಿತ-ಕಲಾವಿದರ ಜೀವಿತ ಘಟನಾ ಕವನಗಳಲ್ಲಿ ಭೌತಿಕಸತ್ಯಕ್ಕಿಂತಲೂ ಭಾವುಕಸತ್ಯವೇ ಪ್ರಧಾನವಾಗಿರುವುದುಂಟು. ಇಂಥ ಕವಿತೆಗಳಲ್ಲಿ ನಿರೂಪಿಸಲ್ಪಟ್ಟ ಅನೇಕ ವಿಚಾರಗಳು ವಸ್ತುತಃ ಆಯಾ ವ್ಯಕ್ತಿಗಳ ಬಾಳಿನಲ್ಲಿ ನಡೆಯದೆಯೇ ಇರಬಹುದು, ಒಬ್ಬನ ಬಾಳಿನ ಸ್ವಾರಸ್ಯಗಳು ಮತ್ತೊಬ್ಬನದೆಂಬಂತೆ ನಿರೂಪಿತವಾಗಿರಬಹುದು. ದೇಶ-ಕಾಲಗಳಲ್ಲಿ ವ್ಯವಸ್ಥೆ ಇಲ್ಲದಿರಬಹುದು. ಅದೆಷ್ಟೋ ವಿಚಾರಗಳು ಆಯಾ ವ್ಯಕ್ತಿಗಳ ಉತ್ಕರ್ಷಕ್ಕೋ ಅಪಕರ್ಷಕ್ಕೋ ತತ್ತ್ಫಲೇಚ್ಛುಗಳಾದ ಅನಾಮಧೇಯರಿಂದಲೇ ರೂಪಿತವಾಗಿ ಮೂಲ-ವ್ಯಕ್ತಿಗಳಲ್ಲಿ ಆರೋಪಿತವಾಗಿಯೂ ಇರಬಹುದು. ಆದರೆ ಅಪವಾದಗಳನ್ನೂ, ಅತಿರೇಕದ ಅನೌಚಿತ್ಯಗಳನ್ನು ಒತ್ತಟ್ಟಿಗಿರಿಸಿದರೆ ಇಂಥ ಸಂದರ್ಭಶುದ್ಧಿಯುಕ್ತ ಕವಿತೆಗಳಿಂದಾಗಿ ನಮಗೆ ಪ್ರಧಾನವಾಗಿ ಕಾಣಬರುವುದು ಉದ್ದಿಷ್ಟ ವ್ಯಕ್ತಿಗಳ ಶೀಲ ಸೌಂದರ್ಯ ಮತ್ತು ಬೋಧಪ್ರದವಾದ ಆನಂದ. ಬಾಹ್ಯವಿವರಗಳ ವಿಚಿಕಿತ್ಸೆಗೆ ಹೊರಟರೆ ನಮಗಿವು ದುರ್ಲಭವಾಗುತ್ತವೆ. ಹಾಗೆಂದು ಬಾಹ್ಯ ವಿವರ ಪ್ರಧಾನವಾದ ಪ್ರಾಯೋಗಿಕ ಪರೀಕ್ಷಾತ್ಮಕವಾದ ಸಂಶೋಧನೆಯನ್ನು ಅಲ್ಲಗಳೆಯಬೇಕಿಲ್ಲ, ಇದೊಂದೇ ಪರಮಾರ್ಥವೆಂದೂ ಬೆಂಡಿಸಬೇಕಿಲ್ಲ. ಇಲ್ಲಿ ನಿರೂಪಿತವಾಗಿರುವ ಘಟನೆಗಳ, ವ್ಯಕ್ತಿಗಳ ಹಾಗೂ ಅನುಭವಗಳ ತಾತ್ಪರ್ಯಪೂರ್ವಕವಾದ ಸ್ವಾರಸ್ಯವು ಮೇಲೆ ತಿಳಿಸಿದ ಸಂಶೋಧನ ಪ್ರಜ್ಞೆಗೂ ಒಂದಿಷ್ಟು ಪೂರಕವಾಗಿ ಹೊಸ ಬಗೆಯ ಅಂತರ್ದೃಷ್ಟಿಯನ್ನು ಕಿಂಚಿತ್ತಾದರೂ ನೀಡಬಲ್ಲುದೆಂಬುದೇ ಪ್ರಕೃತ ಆಶಯ.

ಜಗನ್ನಾಥ ಪಂಡಿತನ ಆತ್ಮವಿಶ್ವಾಸವನ್ನು 'ದಿಲ್ಲೀಶ್ವರೋ ವಾ ಜಗದೀಶ್ವರೋ ವಾ...' ಪದ್ಯವು ತೋರುವಂತೆ ಹಲವು ಪ್ರೌಢಪ್ರಬಂಧಗಳು ಆ ಬಗೆ ತೋರಲಾರವು. ಉದ್ದಂಡಕವಿಯ ಕೆಚ್ಚನ್ನೂ, ಸತ್ಯನಿರ್ಭೀತಿಯನ್ನೂ 'ಚತುರಂ ತುರಗಂ...' ಪದ್ಯವು ಬಿಂಬಿಸುವಂತೆ ನಾಲ್ಕಾರು

ಉಪನ್ಯಾಸಗಳು ಆ ನಿಟ್ಟಿನಲ್ಲಿ ಫಲಪ್ರದವಾಗಲಾರವು. ವಂಚನೆಯ ನವನವೋನ್ಮೇಷತೆಯನ್ನು 'ಅಸ್ಯ ಮೂರ್ಖಸ್ಯ ಯಾಗೇsಸ್ಮಿನ್...' ಶ್ಲೋಕವು ವ್ಯಂಜಿಸುವಂತೆ ಮೋಸದ ಮೀಮಾಂಸೆಯನ್ನು ಕುರಿತು ಗ್ರಂಥಗಳು ರೋಚಕ ವಾಗಿ ಹೇಳಲಾರವು. ಹೀಗೆ ಅಂತರಂಗನಿದರ್ಶನವನ್ನು ಪ್ರಧಾನವಾಗಿ ದೃಷ್ಟಿ ಯಲ್ಲಿರಿಸಿಕೊಂಡ ಈ ಬಗೆಯ ಕಥಾಯುಕ್ತಕವಿತೆಗಳು ಬಹಿರಂಗವ್ಯಾಸಂಗಕ್ಕೂ ಒತ್ತಾಸೆ ನೀಡುತ್ತವೆ.

ಸಂಸ್ಕೃತ ಸಾಹಿತ್ಯದಲ್ಲಿ ಪ್ರಧಾನವಾಗಿ ಕಂಡುಬರುವ ಇಂಥ ಕಥಾನು ಪ್ರಾಣಿತವಾದ ಚಾಟುಗಳು ಇತರ ಭಾರತೀಯಭಾಷೆಗಳಲ್ಲಿ ಹೆಚ್ಚಾಗಿ ಕಾಣ ಸಿಗುತ್ತಿಲ್ಲ (ಇದಕ್ಕೆ ತೆಲುಗುಸಾಹಿತ್ಯ ಮಾತ್ರ ಸಂತೋಷಾಸ್ಪದವಾದ ಅಪ ವಾದವಾಗಿದೆ). ಅಷ್ಟೇಕೆ ರೋಚಕವಾದ ಕಥಾನಕದಂತೆ ಕಂಗೊಳಿಸುವ ಅದೆಷ್ಟೋ ಪ್ರಸಂಗಗಳು ಪಾಶ್ಚಾತ್ಯಲೋಕದ ಮಹಾವ್ಯಕ್ತಿಗಳ ಜೀವಿತಗಳಲ್ಲಿ ಕಂಡು ಬಂದು ನೂರಾರು ಸಂಪುಟಗಳಲ್ಲಿ ನಿಬದ್ಧವಾಗಿದ್ದರೂ, ಅಂಥ ಪ್ರತಿ ಯೊಂದು ಘಟನೆಯನ್ನೂ ಛಂದೋಬದ್ಧವೂ, ಶ್ರುತಿಸುಭಗ ಪದಪದ್ಧತಿಬಂಧು ರವೂ ಆದ ಕವಿತಾರೂಪದಲ್ಲಿ ಸಾರವತ್ತಾಗಿ, ಸಂಗ್ರಹವಾಗಿ ಸಂಪುಟೀಕರಿಸಿರುವ ಆತಿಶಯವು ಕೇವಲ ಸಂಸ್ಕೃತಕ್ಕೆ (ತೆಲುಗಿಗೂ ಸಹ) ಮಾತ್ರ ಬಹುಕಾಲ ದಿಂದಲೂ ಸಂದುಬಂದಿರುವ ಅಗ್ಗಳಿಕೆಯೆಂದರೆ ಈ ಪ್ರಕಾರದ ಸಾಹಿತ್ಯದ ವೈಶಿಷ್ಟ್ಯವನ್ನು ರಸಜ್ಞರು ಮನಗಾಣಬಹುದು.

ಕೇವಲ ಮೌಖಿಕ ಪರಂಪರೆಗೆ ಹೆಚ್ಚಾಗಿ ಮೀಸಲಾಗಿದ್ದ ಈ ಬಗೆಯ ಕವಿಕಥಾವಿಷಯಕ ಚಾಟುಗಳೂ, ಲೋಕ ವೈಚಿತ್ರ್ಯ ವಿಡಂಬಕವಾದ ಸಂದರ್ಭ ಗರ್ಭಿತ ಶ್ಲೋಕಗಳೂ ಈ ಶತಮಾನದ ಆರಂಭದಿಂದ ಗ್ರಂಥಸ್ಥವಾಗಲು ತೊಡಗಿದವಾದರೂ ಇವು ಕೇವಲ ಆಯಾ ಕವಿಗಳ, ವ್ಯಕ್ತಿಗಳ ಸಂಬಂಧಿತವಾದ ಕೃತಿಗಳ ಪ್ರಸ್ತಾವನೆಯಲ್ಲಿಯೋ, ಪೀಠಿಕೆಯಲ್ಲಿಯೋ ಅಷ್ಟಪ್ಪರ ಮಟ್ಟಿಗೆ ಮಾತ್ರ ಸೇರುತ್ತಿದ್ದವು. ಇದು ಆ ಮಟ್ಟಿಗೆ ಸರಿಯೂ ಹೌದು. ಇನ್ನು ಕೆಲ ವೊಮ್ಮೆ ಸಾಹಿತ್ಯಚರಿತ್ರೆ-ಕವಿಚರಿತ್ರೆಯೇ ಮೊದಲಾದ ಗ್ರಂಥಗಳಲ್ಲಿಯೂ ಸೇರ್ಪಡೆಯಾಗುತ್ತಿದ್ದದ್ದುಂಟು. ಅಲ್ಲದೆ ಸುಭಾಷಿತ ಸಂಗ್ರಹ ಸದೃಶವಾದ ಸಂಕಲನಗಳಲ್ಲಿಯೂ ಬಹುತೇಕ ವಿವರಣೆ-ಹಿನ್ನೆಲೆಗಳಿಲ್ಲದೆ ಸೇರಿಕೊಳ್ಳು

ತ್ತಿದ್ದದ್ದುಂಟು. ಒಟ್ಟಾರೆ ಒಂದೆಡೆ ಇಂಥ ರಚನೆಗಳನ್ನೆಲ್ಲ ವ್ಯವಸ್ಥಿತವಾಗಿ ಕ್ರೋಢೀಕರಿಸಿ ಸಮುಚಿತ ವಿವರಣಗಳೊಡನೆ ಪ್ರಸ್ತುತಪಡಿಸಬೇಕೆಂಬ ಪ್ರಯತ್ನ ಪ್ರಾಯಶಃ ನಾನರಿತಂತೆ, ಇಲ್ಲವೆನ್ನುವಷ್ಟು ವಿರಳ. ಈ ಬಗೆಯ ಅವಜ್ಞೆಗೆ ಪ್ರಾಯಶಃ ಇಂದಿನ ವಿದ್ಯಾಭ್ಯಾಸಪದ್ಧತಿಯೂ, ಸಂಶೋಧನ ರೀತಿಯೂ ಕಾರಣಗಳಾಗಿರಬಹುದು. ವರ್ಣನಾತ್ಮಕವೂ (Descriptive) ಚಿಕಿತ್ಸಕವೂ (Analytical) ಆದ ಸಂಶೋಧನಮಾರ್ಗವು ತರ್ಕಾತೀತವೂ, ತಾತ್ತ್ವಿಕಶೀಲ ಸ್ವಭಾವದ್ಯೋತಕವೂ ಎನಿಸಿದ ವಿಚಾರಗಳನ್ನು ಅಪ್ರಮಾಣ ಮತ್ತು ಅನಿರ್ವಾಚ್ಯಗಳೆಂದು ಅವುಗಳ 'ಅವೈಜ್ಞಾನಿಕ' ಸ್ವರೂಪವನ್ನೇ ಲಕ್ಷಿಸಿ ಪಕ್ಕಕ್ಕಿಟ್ಟುಬಿಡುತ್ತದೆ. ಇದಕ್ಕೆ ಮೂಲಕಾರಣವಾದರೋ ವಿವರ ಸಂಗ್ರಹಣ ಪ್ರಧಾನವೂ (Information based), ವರ್ಗೀಕರಣ ಮತ್ತು ಅನಾತ್ಮೀಕರಣ ವ್ಯಗ್ರವೂ (classification and impersonal) ಆದ ನೂತನ ಶಿಕ್ಷಣ ವಿಧಾನವು ಇಂಥ ಮೌಖಿಕ ಪರಂಪರೆಯ, ಪ್ರಾಚೀನ ಧೋರಣೆಗಳ ಬಗೆಗೆ ವಿಮುಖವಾಗಿರುವುದೇ ಆಗಿದೆ. ಈ ಬಗೆಯ ದೃಷ್ಟಿಭೇದಗಳ ಕಾರ್ಯ ಕಾರಣ ಸಂಬಂಧವೂ, ಅನಿವಾರ್ಯಗತಿಯೂ, ತತ್ಫಲಿತವಾದ ಲಾಭಾಲಾಭಗಳೂ ಸದ್ಯಕ್ಕೆ ಚರ್ಚನೀಯವಲ್ಲ. ಆದರೂ ಒಂದೆರಡು ಮಾತುಗಳನ್ನು— ವಿಶೇಷತಃ ಸಂಸ್ಕೃತ ಮತ್ತು ತತ್ಸದೃಶವಾದ ಪ್ರಾಚೀನ ಸಾಹಿತ್ಯ ವಿದ್ಯಾಭ್ಯಾಸ ಹಾಗೂ ಸಂಶೋಧನೆಗಳಿಗೆ ಸಂಬಂಧಿಸಿದಂತೆ ಹೇಳಬೇಕಾಗಿದೆ.

ನನಗೆ ಪರಿಚಿತನಾದ ಒಬ್ಬ ತರುಣಮಿತ್ರನು ಸಂಸ್ಕೃತದಲ್ಲಿ ಸ್ನಾತಕೋತ್ತರ ಪದವೀಧರ, ಮಾತ್ರವಲ್ಲ ವಿಶ್ವವಿದ್ಯಾಲಯಕ್ಕೇ ಮೊದಲಿಗನಾಗಿ ನಾಲ್ಕಾರು ಪದಕ–ಪ್ರಶಸ್ತಿಗಳನ್ನು ಪಡೆದ ಪ್ರತಿಭಾಶಾಲಿ. ಅಲ್ಲದೆ ವಿನಯ ಸಂಪನ್ನನೆನಿಸಿ ಬಹುವಿಷಯ ಕುತೂಹಲಿಯೂ ಆಗಿದ್ದಾನೆ. ಹೀಗಿದ್ದರೂ ನಾಲ್ಕಾರು ಪಾಠ್ಯೇತರ ಪದ್ಯಗಳನ್ನಾಗಲಿ, ಕವಿಕಥಾಸ್ವಾರಸ್ಯಗಳನ್ನಾಗಲಿ ವಾಚೋವಿಧೇಯವಾಗಿರಿಸಿಕೊಳ್ಳುವುದಿರಲಿ ಗಮನಿಸಿದಂತೆಯೂ ಕಾಣೆ ! ಅಂತ್ಯಾಕ್ಷರೀ ಕ್ರೀಡೆಗಳಲ್ಲಿ–ನಾಲ್ಕೈದು ಜನರು ಮಾತ್ರವಿರುವಾಗಲೂ ಒಂದು ಸುತ್ತಿಗೂ ನಿಲ್ಲದಷ್ಟು ರಿಕ್ತತೆ ಆತನದಾಗಿದೆ. ಇಷ್ಟು ಮಾತ್ರಕ್ಕೂ ಬಾರದ ಪಾಂಡಿತ್ಯವು ಇನ್ನೆಷ್ಟು ಬಡಕಲಾಗಿರಬಹುದೆಂದು ವಾಚಕರೇ ಆಲೋಚಿಸಬೇಕು.

ಇದು ಹಳಗನ್ನಡದಂಥ ಇತರ ವಿಭಾಗಗಳಿಗೂ ಅಷ್ಟೇ ಸಮರ್ಥವಾಗಿ ಅನ್ವಯಿಸುತ್ತದೆ. ಮೂಲತಃ ಅಧ್ಯಾಪಕರಿಗೇ ಈ ನಿಟ್ಟಿನಲ್ಲಿ ಅಜ್ಞಾನವೆಂದ ಮೇಲೆ ವಿದ್ಯಾರ್ಥಿಗಳನ್ನೇಕೆ ದೂರಬೇಕು ?

ಕನ್ನಡವೇ ಮೊದಲಾದ ಇತರ ಭಾಷೆಗಳಲ್ಲಿಯೂ* ಹಿಂದೆ ತಕ್ಕಮಟ್ಟಿಗೆ ಇದ್ದಿರಬಹುದಾದ ಕವಿಕಥಾಚಾಟುಗಳೇ ಮೊದಲಾದುವುಗಳು ಕ್ರಮೇಣ ಅದು ಹೇಗೋ ಬಹುಪಾಲು ಲುಪ್ತವಾಗಿಬಿಟ್ಟವೆ. ಇದಕ್ಕೆ ಮುಖ್ಯ ಕಾರಣ ಪ್ರಾಯಶಃ ಅಂದಿನ ವಿದ್ವಾಂಸರಿಗೂ, ಜನತಾರಸಿಕರಿಗೂ ಇವುಗಳ ಬಗೆಗೆ ಇದ್ದ ಅನಾಸ್ಥೆಯೇ ಆಗಿರಬಹುದು. ಇದೇ ತರ್ಕವನ್ನನ್ವಯಿಸಿದರೆ ಪ್ರಕೃತ ಸಂಸ್ಕೃತ ಮತ್ತು ತೆಲುಗುಗಳಂಥ ಭಾಷೆಗಳ ಸಮೃದ್ಧ ಚಾಟುಕಥಾ ಸಾಹಿತ್ಯವೂ ಬೇಗದಲ್ಲಿ ವಿಸ್ಮೃತಿಯ ಕೊರಕಲಿಗೆ ಜಾರದೆ ಇರದು. ಅದ್ಭುತವಾಗಿ ಗ್ರಂಥ ಮುದ್ರಣ-ರಕ್ಷಣ ಸೌಲಭ್ಯಗಳಿರುವ ಈ ಅತ್ಯಾಧುನಿಕ ಕಾಲದಲ್ಲಿ ಅಂಥ ಭೀತಿ ಅನವಶ್ಯವೆನ್ನಬಹುದಾದರೂ ಜಿಹ್ವಾಗ್ರದಲ್ಲಿ ನಿಂತು, ಮನದಾಳದಲ್ಲಿ ಬೇರೂರಿ, ಸಮಯೋಚಿತವಾಗಿ ಉದ್ಧೃತವಾಗಿ, ಕೇಳುಗರ ಮನಸ್ಸಿಗೂ ಹೇಳುಗನ ಅಂತರಂಗಕ್ಕೂ ಚಮತ್ಕಾರದ ವಿದ್ಯುದಾನಂದವನ್ನುಂಟುಮಾಡದ ರಚನೆ ಕೇವಲ ಈಜಿಪ್ಟಿನ ಮಮ್ಮಿಗಳಂತೆ ಮಬ್ಬುಗವಿಗಳಾದ ಗ್ರಂಥಾಲಯದ ಧೂಳಿಡಿದ ಕಪಾಟುಗಳ ಅಜ್ಞಾನಕೋಣಗಳಲ್ಲಿ, ಪುಸ್ತಕಶವಪೇಟಿಕೆಗಳ ನಿಗೂಢಗರ್ಭದಲ್ಲಿ ಕಳೇವರಾವಶೇಷ ಪ್ರಾಯವಾಗಿ ಕ್ರಿಮಿಕೀಟಗಳಿಗೆ ಆಹಾರವಾಗುತ್ತಾ ಕೊಳೆಯುವುದರಲ್ಲಿ ಏನು ಸಾರ್ಥಕವಿದೆ ? ಎಂಥ ಜೀವಂತಿಕೆಯಿದೆ ? ಅದರಲ್ಲಿಯೂ ಭಾರತೀಯ ಪ್ರಜ್ಞೆಯ ವಿಶೇಷತೆಯನ್ನು ತಾತ್ತ್ವಿಕವಾಗಿ ಲಘು ಮತ್ತು ಗಂಭೀರ ಮುಖಗಳೆರಡರಿಂದಲೂ ತೋರಬಲ್ಲ ಇಂಥ ಚಾಟುಕಥಾರಚನೆಗಳು ನಮ್ಮ ಸಂಸ್ಕೃತಿಯ ಅನನ್ಯ-ಸ್ವೋಪಜ್ಞ ವೈಶಿಷ್ಟ್ಯಗಳಾಗಿರುವಾಗ ಇವುಗಳ ಜೀವದ್ರಕ್ಷಣೆ ಮತ್ತು ಆತ್ಮೀಯ ಪೋಷಣೆಗಳಿಗೆ ನಿರ್ಜೀವ ಯಂತ್ರ ಸಾಧನ

ಗಳೂ, ಶುಷ್ಕ ಪುಸ್ತಕ ಪ್ರಕರಗಳೂ ಸಾಕಾಗಲಾರವು ; ಅಷ್ಟೇಕೆ ವಿಡಂಬನಗಳೇ ಆದಾವು. ಹೀಗಿರಲು ಪ್ರಕೃತ ಪ್ರಯತ್ನವೂ ವ್ಯರ್ಥವಲ್ಲವೇ ಎನ್ನಬಹುದು ! ನಿಜ, ಪರಮಾರ್ಥತಃ ವ್ಯರ್ಥವೇ ! ಮುಳ್ಳನ್ನು ಮುಳ್ಳಿನಿಂದಲೇ ತೆಗೆದ ಬಳಿಕ ಅವೆರಡನ್ನೂ ಒಟ್ಟಾಗಿ ಬಿಸುಡುವಂತೆ ಈ ಬಗೆಯ ಸಂಕಲಿತ ಪುಸ್ತಕಗಳಿಂದ ವಿಚಾರಗಳನ್ನು ಸಂಗ್ರಹಿಸಿ, ಚಾಟುಕಥಾಕವಿತೆಗಳನ್ನು ಧಾರಣೆಯಲ್ಲಿ ಸ್ಥಿರಪಡಿಸಿ ಆ ಬಳಿಕ ಇವುಗಳ ಅವಲಂಬನದಿಂದ ದೂರಾಗಬೇಕೆಂಬುದೇ ಇಲ್ಲಿಯ ಅಭೀಪ್ಸೆ !!

ಈಗಿಗೆ ಸುಮಾರು ಮೂರು ತಲೆಮಾರಿನ ಹಿಂದಿದ್ದ (ಸುಮಾರು 80–100 ವರ್ಷಗಳ ಹಿಂದೆ) ಸಂಸ್ಕೃತಪಂಡಿತರಾಗಲಿ, ಸುಸಂಸ್ಕೃತರಾದ ರಸಜ್ಞರಾಗಲಿ ತಮ್ಮ ಆಪ್ತಗೋಷ್ಠಿಗಳಲ್ಲಿಯೂ, ಪಾಠ-ಪ್ರವಚನಗಳಲ್ಲಿಯೂ ಪದೇ ಪದೇ ಸಮಯೋಚಿತವಾಗಿ ಉದಾಹರಿಸುತ್ತಿದ್ದ ಚಾಟುಕಥಾಕವಿತೆಗಳು ಅನೇಕ. ಅವರಿಗಿಂತಲೂ ಎರಡು ಮೂರು ತಲೆಮಾರಿನ ಹಿಂದಿನ ವಿದ್ವದ್ರಸಿಕರಂತೂ ಸ್ವಯಂ ಆಶುವಾಗಿ ತತ್ತತ್ಕಾಲೋಚಿತವಾದ ಕವಿತೆಗಳನ್ನು ಕಟ್ಟಿ, ಹೇಳಿ ಈ ಬಗೆಯ ಸಾಹಿತ್ಯಕ್ಕೆ ಸೃಷ್ಟ್ಯಾತ್ಮಕ ಸೇವೆಯನ್ನೇ ಸಲ್ಲಿಸುತ್ತಿದ್ದದ್ದುಂಟು. ಇಂಥ ಪರಂಪರೆ ಈಗ ಲುಪ್ತವಾಗಿಹೋಯಿತೆಂದು ಹೇಳಬಹುದಾದಷ್ಟು ಕ್ಷೀಣಿಸಿದೆಯಾದರೂ ಇಂದಿಗೂ ಕೇವಲ ಹಿಂದಿನ ಕವಿತೆಗಳ ಸಮಯೋಚಿತ ಉದ್ಧರಣಗಳನ್ನು ಮಾತ್ರವಲ್ಲ, ಸ್ವಯಂ ಆಶೂಕ್ತಕವಿತೆಗಳನ್ನೂ ಮೆರೆಯಿಸಬಲ್ಲ ಕೆಲವರಾದರೂ ವಿದ್ವತ್ಕವಿಗಳು ನಮ್ಮಲ್ಲಿದ್ದಾರೆಂಬುದು ಹರ್ಷದ, ಹೆಮ್ಮೆಯ ಸಂಗತಿ. ಆದರೆ ಈ ಬಗೆಯ ಸಾಹಿತ್ಯವು ಬರಹದ ರೂಪದಲ್ಲಿ ಒಂದೆಡೆ ಸವ್ಯಾಖ್ಯೆಯಾಗಿ ಬಾರದಿದ್ದರೆ ಇದನ್ನು ಸ್ವಲ್ಪವೂ ತಿಳಿಯದ, ಆದರೆ ಇಂಥ ವಿಚಾರಗಳಿವೆಯೆಂದು ತಿಳಿದ ಬಳಿಕ ಆಸಕ್ತಿಯಿಂದ ಕಾರ್ಯಪ್ರವೃತ್ತವಾಗುವ ಭಾವಿಜನಾಂಗಕ್ಕೆ ಅನ್ಯಾಯವಾದೀತೆಂದು ಭಾವಿಸಿ ಋಷಿಋಣವಿಮೋಚನಕ್ಕಾಗಿಯೋ ಎಂಬಂತೆ ಪ್ರಕೃತೋದ್ಯಮವನ್ನು ಕೈಗೊಳ್ಳಲಾಗಿದೆ.

ಇನ್ನು ಈ ಕೃತಿಯ ಸ್ವರೂಪದ ಬಗೆಗೆ ಕೆಲವೊಂದು ಅಂಶಗಳನ್ನು ನಿವೇದಿಸಬೇಕಾಗಿದೆ. ಈ ಮುನ್ನವೇ ತಿಳಿಸಿದಂತೆ ಈ ಬಗೆಯ ರಚನೆಗಳು

ಸಂಶೋಧನ ಕುತೂಹಲಿಗಳಿಗಾಗಿ ಅಲ್ಲ. ಅಲ್ಲದೆ ಇದು ಆಧುನಿಕ ಸಂಶೋಧನ ಪದ್ಧತಿಯನ್ನನುಸರಿಸಿ ಟಿಪ್ಪಣಿಗಳು, ಪಾಠಾಂತರಗಳು, ಆಕರಗಳು, ದೇಶ-ಕಾಲ ಚರ್ಚೆಗಳೇ ಮೊದಲಾದುವನ್ನು ಒಳಗೊಂಡ ವಿದ್ವತ್ಸಾಹಸವೂ ಅಲ್ಲ. ಇದು ಕೇವಲ ಪರಂಪರೆಯಿಂದ ಜನಜನಿತವಾಗಿ, ಕೆಲವೊಂದು ಗ್ರಂಥಗಳಲ್ಲಿ ಉಲ್ಲೇಖಿತವಾಗಿ ಬಂದ ಕವಿಕಥಾತ್ಮಕ ಚಾಟುಕವಿತೆಗಳ ಸಂಗ್ರಹ. ಪ್ರತಿಯೊಂದು ಪದ್ಯವನ್ನೂ ಮೊದಲಿಗೆ ಉದ್ಧರಿಸಿ ಅನಂತರ ಅದರ ಸಂದರ್ಭ ಸ್ವಾರಸ್ಯವನ್ನೂ ಪದ್ಯಾನುವಾದಸಹಿತವಾಗಿ ಕೊಡಲಾಗಿದೆ. ಇದರೊಟ್ಟಿಗೆ ಆ ಪದ್ಯದ ಕರ್ತೃವಿನ ಲಘುಪರಿಚಯವೂ ಸೇರಿಕೊಂಡಿದೆ. ಕೆಲವು ಪ್ರಸಂಗಗಳಲ್ಲಿ ಬಂದಿರುವ ವಿಶೇಷವಿಚಾರಗಳ ವಿವರಣೆಗಾಗಿ ಒಂದೆರಡು ಪುಟ್ಟ ಟಿಪ್ಪಣಿಗಳೂ ಇಲ್ಲಿವೆ. ಮತ್ತೂ ಹಲವೆಡೆ ಇಂಥ ವಿಶದೀಕರಣಗಳು ಬೇಕಿತ್ತೆಂದು ಸಹೃದಯರು ಕೆಲವರು ಭಾವಿಸಬಹುದಾದರೂ ಈ ಬಗೆಯ ಗ್ರಂಥಗಳಿಗೆ ಸ್ವಲ್ಪಮಟ್ಟಿಗೆ ಪೂರ್ವಸಿದ್ಧತೆ ಇರಲೇಬೇಕಾದುದರಿಂದ ಅಂಥ ಅಪೇಕ್ಷಿತ ವಿಚಾರಗಳು ಪೂರ್ವವೇದ್ಯವೆಂದೇ ಗೃಹೀತವಾಗಿ ಭಾವಿಸಿ ಹೆಚ್ಚಿನ ವಿವರಣೆಗಳಿಗೆ ಕೈಹಾಕಿಲ್ಲ. ಹಲವು ಬಾರಿ ಈ ಮೊದಲೇ ತಿಳಿಸಿದಂತೆ ಇಲ್ಲಿಯ ಹೆಚ್ಚಿನ ಸಂಗತಿಗಳಿಗೆ ಜನಶ್ರುತಿಯೂ, ಪಂಡಿತಪರಂಪರೆಯ ವಾಙ್ಮೂಲವೂ ಆಕರವಲ್ಲದೆ ಅನ್ಯಪ್ರಮಾಣಗಳಿಲ್ಲ. ಹೀಗಾಗಿ ಇಲ್ಲಿ ಕಾಣಬಹುದಾದ ಕವಿಜೀವನ ಯಾಥಾರ್ಥ್ಯವನ್ನು ಆಧುನಿಕ ಸಂಶೋಧನ ನೇಪಥ್ಯದಲ್ಲಿ ಪರಾಮರ್ಶಿಸಿದಾಗ ಉಂಟಾಗಬಹುದಾದ ಅನನ್ವಯಗಳನ್ನಾಗಲಿ, ಅದ್ಭುತವೆನಿಸುವ ಅತಿಲೋಕ ಘಟನೆಗಳನ್ನಾಗಲಿ 'ಕಾವ್ಯನ್ಯಾಯ' ಅಥವಾ 'ಅವಿಶ್ವಾಸಗಳ ತತ್ಕಾಲೀನಸ್ಥಗನ' (willing suspension of disbelief) ಎಂಬ ವೃತ್ತಿಯಿಂದ ಪರಿಪರಿಸಿಕೊಂಡರೆ ಅನುಕೂಲಕಾರಿ.

ಇಲ್ಲಿರುವ ಕೆಲವು ನಿದರ್ಶನಗಳು ಸ್ವಲ್ಪ ಮಟ್ಟಿಗೆ ಒರಟಾಗಿಯೋ, ವಾಚಕರ ವೈಯಕ್ತಿಕ ಶ್ರದ್ಧಾಸಕ್ತಿಗಳಿಗೆ ಕಿಂಚಿತ್ ಆಘಾತಕರವಾಗಿಯೋ ಕಂಡಲ್ಲಿ ಅಂಥದ್ದನ್ನು ಉದಾರತೆಯಿಂದ ಗ್ರಹಿಸಬೇಕೆಂದೂ ಬೇಡಿಕೆಯಿದೆ. ಅಲ್ಲದೆ ನಾನಾ ಮನಸ್ತತ್ತ್ವಗಳ ಕವಿಗಳನ್ನು ಕುರಿತ ಪದ್ಯಪ್ರಸಂಗಗಳಾದುದರಿಂದ ಆಯಾ ಭಾವಗಳ ಹೊಳಹೇ ಇಲ್ಲಿರುವುದು ಅನಿವಾರ್ಯ. ವಿದ್ಯಾಮದದಂತೆಯೇ

ವಿನಯಶೀಲತೆಯೂ, ದೈವಾಕ್ಷೇಪದಂತೆಯೇ ದೈವಶ್ರದ್ಧೆಯೂ, ಆತ್ಮಸ್ಥೈರ್ಯದಂತೆಯೇ ವಿಧಿಪಾರಮ್ಯವೂ ಇಲ್ಲಿ ಸಹಜ. ಆದಾಗ್ಯೂ ಇವುಗಳೆಲ್ಲ ಅನುಸ್ಯೂತವಾದ ವಿದಗ್ಧಭಂಗೀಭಣಿತಿಗುಣವನ್ನು ಕಂಡಾಗ, ಭಾರತೀಯ ಧಿಷಣಾಧಿಕ್ಯದ ರಾಸಿಕ್ಯವನ್ನು ಗುರುತಿಸಿದಾಗ ಏಕಸೂತ್ರತೆ ಸಿಗದಿರದು. ಹಾಸ್ಯವಂತೂ ಇಲ್ಲಿಯ ಅನೇಕ ಪ್ರಸಂಗಗಳ ಜೀವಾತುವಾಗಿದೆ. ಇದಾದರೂ ನವುರಾದ ಸ್ಮಿತದಿಂದ ಮೊದಲಾಗಿ ಅತಿ ತೀವ್ರವಾದ ನಿಶಿತ ವಿಡಂಬನೆಯ ವರೆಗೂ ಹಬ್ಬಿದ ಬಹುವಿಸ್ತೃತವೂ, ವೈವಿಧ್ಯಪೂರ್ಣವೂ ಆದ ರಸವಿಶೇಷ. ಆ ಸೇತುಶೀತಾಚಲದ ಅನೇಕ ಕವಿ-ಪಂಡಿತರ ಪ್ರಸಕ್ತಿಯು ಹಲವು ತೆರನಾಗಿ ಬಂದಿದೆ. ಕವಿಕುಲಗುರು ಕಾಳಿದಾಸನಿಂದ ಮೊದಲಾಗಿ ಇಂದಿನವರಾದ ಶ್ರೀಯುತ ಲಂಕಾ ಕೃಷ್ಣಮೂರ್ತಿಯವರ ವರೆಗೆ ಸುಮಾರು ಸಾವಿರದೈನೂರು ವರ್ಷಗಳ ಅವಧಿಯಲ್ಲಿ ಮಿಂಚಿ ಮೆರೆದ ಸುಪ್ರಸಿದ್ಧ-ಅಪ್ರಸಿದ್ಧ-ಅಜ್ಞಾತ ಲೇಖಕರ ಅನೇಕ ಕವಿತಾಪ್ರಸಂಗಗಳು ಇಲ್ಲಿವೆ. ಸ್ಥೂಲವಾಗಿ ಕಾಲದ ಆನುಪೂರ್ವಿಯನ್ನು ಅನುಸರಿಸಲಾಗಿದೆಯಾದರೂ ಕಡೆಯಲ್ಲಿರುವ ಅಜ್ಞಾತಲೇಖಕ ರಚಿತವಾದ ಕವಿತಾಪ್ರಸಂಗಗಳ ಸ್ಥೂಲಕಾಲನಿರ್ಧಾರವೂ ಅಸಾಧ್ಯವಾದುದರಿಂದ ಅವುಗಳು ಸ್ವಲ್ಪ ಪ್ರತ್ಯೇಕವೇ ಆಗಿವೆ. ಆದಾಗ್ಯೂ ಈ ರಚನೆಗಳ ಸ್ವಾರಸ್ಯ-ಪ್ರಸಂಗಾವಧಾನ ಮತ್ತು ಚಾಟುಪಾಟವ ಅನವದ್ಯವಾಗಿ ಹೃದ್ಯವೆನಿಸಿವೆ. ವೈವಿಧ್ಯಕ್ಕಾಗಿ ಇವುಗಳನ್ನಿಲ್ಲಿ ಅಳವಡಿಸಿಕೊಂಡಿರುವುದನ್ನು ಸಹೃದಯರು ಮೆಚ್ಚುವರೆಂದೇ ಭಾವಿಸಿದ್ದೇನೆ. ಏಕೆಂದರೆ ಸಂಸ್ಕೃತದಲ್ಲಿ ಜ್ಞಾತಲೇಖಕರ ಬರಹಗಳಷ್ಟೇ ಅಜ್ಞಾತ ಲೇಖಕರ ರಚನೆಗಳೂ ಅಷ್ಟೇ ಸ್ವಾರಸ್ಯವೂ ಪ್ರಮುಖವೂ ಆಗಿವೆ. ಅಲ್ಲದೆ ಸಂಸ್ಕೃತವಾಣಿಯ ಸರ್ವಜನ ಮನೋರಂಜಕ ಮತ್ತು ಸಾಮಾನ್ಯ ಜನಜೀವನ ಬಿಂಬಕ ಘಟನೆಗಳೂ ಇಂಥ ಪ್ರಸಂಗಗಳಿಂದ ತಿಳಿದು ಆ ದಿವ್ಯವಾಣಿಯ ಸಮಸ್ತಸ್ತರಮೋಹಕ ಸೌಂದರ್ಯ ಹಾಗೂ ಉಪಯೋಗಗಳು ಅಭಿಪ್ರೇತವಾಗುವುವೆಂಬ ಆಶಯವೂ ಇಲ್ಲಿದೆ.

ಪ್ರಕೃತ ಸಂಕಲನದಲ್ಲಿ ವಿದ್ವತ್ಕವಿಗಳಿರುವಂತೆಯೇ ಕವಯಿತ್ರಿಯರೂ ಇದ್ದಾರೆ. ಆದರೆ ಶ್ರೀರಮಣಮಹರ್ಷಿಯಂಥ ಜೀವನ್ಮುಕ್ತರು, ಬಿಲ್ಹಣರಂಥ ಪರೋಕ್ಷರು, ವಾಸುದೇವಾಚಾರ್ಯರಂಥ ವಾಗ್ಗೇಯಕಾರರು,

ಡಿ.ವಿ.ಜಿ., ತೀನಂಶ್ರೀ ಮೊದಲಾದ ಕನ್ನಡ ಸಾಹಿತಿಗಳು ಸೇರಿರುವುದು ಸಾಹಿತ್ಯಾಸಕ್ತರಿಗೆ ಕೌತುಕಾನಂದಕಾರಿಯಾಗುವುದೆಂದು ತಿಳಿದರೆ ತಪ್ಪಾಗದು. ಇಲ್ಲಿರುವ ಪದ್ಯಪ್ರಸಂಗಗಳಲ್ಲಿ ಹೆಚ್ಚಿನವು ಬಿಲ್ಹಣ, ಶ್ರೀಹರ್ಷ, ಉದ್ದಂಡ ಶಾಸ್ತ್ರಿ, ಅಪ್ಪಯ್ಯ ದೀಕ್ಷಿತ, ಮಂಗಲೇಶ್ವರಶಾಸ್ತ್ರಿ, ವಾಸಿಷ್ಠಗಣಪತಿ ಮುನಿ ಮೊದಲಾದವರಿಗೇ ಸಂಬಂಧಿಸಿವೆ. ಇದಕ್ಕೆ ಪ್ರಮುಖ ಕಾರಣ ಅವರ ಪಾಂಡಿತ್ಯ ಪ್ರಖರತೆ ಮತ್ತು ಕವಿತೋದ್ಯಮಗಳು ಮಾತ್ರವಲ್ಲದೆ ಅವರ ವಿಲಕ್ಷಣ ವ್ಯಕ್ತಿತ್ವದಿಂದ ಆಕೃಷ್ಟರಾದ ಸಹೃದಯರು ಅವರ ಬಗೆಗಿನ ಕವಿತಾಪ್ರಸಂಗಗಳನ್ನು ಹೆಚ್ಚಾಗಿ ಸ್ಮೃತಿಯಲ್ಲಿರಿಸಿಕೊಂಡು ಕಾಪಾಡಿರುವುದೋ (ಅಥವಾ ಕಮನೀಯ ಪದ್ಯಸಂದರ್ಭಗಳನ್ನು ಹದವರಿತು ಕಲ್ಪಿಸಿ ಅವರಿಗೆ ಆರೋಪಿಸಿರುವುದೋ) ಅಥವಾ ಅವರ ಜೀವನವನ್ನಾಧರಿಸಿದ ಚರಿತ್ರೆಗಳನ್ನು ಅವರುಗಳ ಜೀವಿತಾವಧಿ ಸಮೀಪದಲ್ಲಿಯೇ ಬರೆದಿರುವುದೋ ಆಗಿರಬಹುದು. ಆದಾಗ್ಯೂ ವೈವಿಧ್ಯಕ್ಕೆ ಕೊರತೆ ಇಲ್ಲಿಲ್ಲವೆಂಬುದನ್ನು ಸುಲಭವಾಗಿಯೇ ತಿಳಿಯಬಹುದು.

ವಿಸ್ಮೃತಿಯ ಕತ್ತಲೆಗೆ ಸೇರಿ ಹೋಗುತ್ತಿರುವ ಈ ಬಗೆಯ ಪದ್ಯ ಪ್ರಸಂಗ-ರತ್ನಗಳ ಸಂಖ್ಯೆ ಅಗಣ್ಯವಾದರೂ ಇವುಗಳನ್ನು ಹುಡುಕಿ, ಹೆಕ್ಕಿ ತೆಗೆಯುವ ಕೆಲಸ ಶ್ರಮಸಾಧ್ಯವಾದದ್ದು. ಈಗಲೂ ಕೋಣಗಳಲ್ಲಿ ಆತ್ಮಾರಾಮರಾಗಿರುವ ಪ್ರಾಚೀನವಿದ್ಯಾಪ್ರತಿನಿಧಿಗಳಾದ ಪಂಡಿತರು ಇಂಥ ಹತ್ತಾರು ಕವಿಕಥಾತ್ಮಕ ಚಾಟುಗಳನ್ನು ಕಂಠಗತವಾಗಿರಿಸಿಕೊಂಡಿರುವುದುಂಟು. ಆದರೆ ಇಂದಿನ ವೇಗ ಪ್ರಪಂಚದಲ್ಲಿ ಅಂಥವರನ್ನು ಕಂಡು, ಶ್ರದ್ಧೆಯಿಂದ ಕೇಳ ಬೇಕಾಮದನ್ನು ತೊಂಮವ ಹದ ದೂರವಾಗುತ್ತಲೇ ಇದೆ. ಇನ್ನು ಗ್ರಂಥ ಸಹಾಯವೋ, ಅದೂ ಅಷ್ಟಿಷ್ಟು ಮಾತ್ರದ್ದೇ. ಈಗಿನ ಬೃಹತ್-ಮಹಾ ನಗರಗಳಲ್ಲಿ ಹೋಟೆಲು, ಬಾರು, ವಿಲಾಸಮಂದಿರಗಳಿಗೆ ಕೊರತೆ ಯಿಲ್ಲದಿದ್ದರೂ ಗ್ರಂಥಾಲಯಗಳಿಗೇ ಅರಕೆ. ಅಲ್ಲಿಯೂ ಸಂಸ್ಕೃತ ಗ್ರಂಥಗಳಿಗೆ ಅವಕಾಶ ಕಡಮೆ. ಇರುವ ಮತ್ತು ಈಚೆಗೆ ಪ್ರಕಟವಾಗುವ ಆಂಗ್ಲೀಕೃತ ಸಂಸ್ಕೃತಗ್ರಂಥಗಳೂ ಪ್ರಸಿದ್ಧ ಕವಿಗಳ, ಗಂಭೀರಶಾಸ್ತ್ರವಿಚಾರಗಳ, ಸೂಕ್ಷ್ಮಾತಿಸೂಕ್ಷ್ಮ ಸಂಶೋಧನೆಗಳ ಪ್ರತಿನಿಧಿಗಳೇ ಹೊರತು ಇಂಥ

ಅಪ್ರಸಿದ್ಧವೂ, ಅಮಹತ್ತ್ವದ್ದೂ ಆದ ಪ್ರೌಢಕೃತಿಗಳ ಬಿಡಿಕವಿತೆಗಳ, ಲಘು ವಿಚಾರಕ್ಕೆ ಸ್ಪಂದಿಸವು. ನಾಗರ ಹೊಳೆಯಂಥ ಕಾಡಿಗೆ ಹೋಗುವ ಜನರು ಮದಕರಿಗಳನ್ನು ಕಾಣಲು ಬಯಸುತ್ತಾರೆಯೇ ಹೊರತು ಮುದಿಕೋಗಿಲೆಯನ್ನಲ್ಲ. ಅದಾವರೂ ಕೇಳಿಸಬಲ್ಲದೇ ಹೊರತು ಕಾಣಿಸಲರಿಯದು !! ವಿಶ್ವವಿದ್ಯಾಲಯಗಳ, ಅಧ್ಯಯನ ಕೇಂದ್ರಗಳ ಪಟ್ಟಭದ್ರ ನವಪಂಡಿತರಿಗೆ ಇವೆಲ್ಲ ಓಲ್ಡ್ ಫ್ಯಾಷನ್ ; ಮುತ್ತಜ್ಜಿಯು ನೆನಪಿಸಿಕೊಳ್ಳುವ ಬೀಗರ ಹಾಡು ಉರುಟಣೆ ಹಾಡುಗಳಂತೆ ಅನಾವಶ್ಯಕ ಕಗ್ಗ ಅಥವಾ ಅಜ್ಞಾತ ಕಂಥೆ ! ಇನ್ನು ದೈನಿಕ-ಸಾಪ್ತಾಹಿಕ ಮಾಸಿಕಗಳಂಥ ವರ್ತಮಾನ ಪತ್ರಿಕೆಗಳಿಗೆ ಸಿನಿಮಾ, ಹೇರು ಪೇಟೆ-ಆಟ-ಪುಂಡಾಟಗಳಂಥ ರೋಚಕವಾರ್ತೆಗಳನ್ನು ಪರಿಪೂರ್ಣವಾಗಿ ಪ್ರಕಟಿಸಿ ಅವುಗಳಿಗೆ 'ನ್ಯಾಯ' ಸಲ್ಲಿಸಲೇ ಸ್ಥಳ-ಸಮಯ (ದೇಶ–ಕಾಲ) ಗಳಿಲ್ಲ !!

ಓಂಗಿರುವಾಗ ಹತ್ತಾರು ವರ್ಷಗಳಿಂದ ಒಟ್ಟಾಡಿದರೂ ನನಗೆ ದೊರೆತ ಫಲ ಭಾರಿಯ ಗಾತ್ರದ್ದೇನಲ್ಲ. ಅದೂ ಅಲ್ಲದೆ ಸಂಗ್ರಹಿಸಿದ ಅದೆಷ್ಟೋ ಚಾಟುಕವಿತಾ ಪ್ರಸಂಗಗಳು ತಮ್ಮ ಅತಿನೈಶಿತ್ಯದಿಂದಾಗಿಯೋ, ಅಶ್ಲೀಲತೆಯೆಂದು ಇಂದಿನ ಸಭ್ಯ ಸಮಾಜ (?) ಮೂಗು ಮುರಿಯುವಂತಿರುವುದರಿಂದಾಗಿಯೋ ಮುದ್ರಣಕ್ಕೆ ಮೈಯೊಡ್ಡಲು ಹಿಂಜರಿದವು. ಇನ್ನು ಕೆಲವು ಕವಿತೆಯ ದೃಷ್ಟಿಯಿಂದ ನೀರಸವೆನಿಸಿದರೆ ಮತ್ತೆ ಹಲವು ಕಥಾದೃಷ್ಟಿಯಿಂದ ಪೇಲವವೆನಿಸಿದವು. ಇನ್ನೂ ಕೆಲವು ಸ್ವಾರಸ್ಯಕರ ಕವಿತೆಗಳು ಗುಚ್ಛಗಳಾಗಿ ಒಂದೇ ಪ್ರಸಂಗದಲ್ಲಿ ಬಂದಾಗ ಪರಿಸ್ಥಿತಿಯನ್ನು ಗಮನಿಸಿ ಅವುಗಳಲ್ಲಿ ಒಂದನ್ನು ಮಾತ್ರ ಗ್ರಹಿಸುವುದೋ ಇಲ್ಲವೇ ಎಲ್ಲವನ್ನೂ ಬಿಡುವುದೋ ಆಯಿತು (ಉದಾ : ಡಿಂಡಿಮ-ದೇಶಿಕ ವಿವಾದ, ಉದ್ದಂಡ–ದಾಮೋದರ ವಿವಾದ, ಗೋಳೀಶ್ರೀ ಪಾಠಶಾಲೆಯ ಪತ್ರಪ್ರಸಂಗ ಇತ್ಯಾದಿ) ಅದೂ ಅಲ್ಲದೆ ಈಗಾಗಲೇ ಪುಸ್ತಕ ರೂಪದಿಂದ ಸಂಸ್ಕೃತದಲ್ಲಿಯೇ ಸಂಕಲಿತವಾದ ಭೋಜಪ್ರಬಂಧ, ರಾಜಶೇಖರ ಚರಿತೆ, ವಿಕ್ರಮಾರ್ಕ ಪಂಚಕ ಮೊದಲಾದ–ಪ್ರಧಾನವಾಗಿ ಈ ಬಗೆಯ ಪದ್ಯ ಪ್ರಸಂಗಗಳನ್ನೇ ದಾಖಲಿಸಿರುವ-ಕೃತಿಗಳನ್ನು ಬಿಟ್ಟು ವ್ಯಸ್ತವಾಗಿ ನಾನಾ ಗ್ರಂಥಗಳಲ್ಲಿ, ಮೌಖಿಕ ಪರಂಪರೆಯಲ್ಲಿಯೇ ಉಳಿದುಹೋಗಿರುವಂಥ ಚಾಟು

ಕಥಾಕವಿತೆಗಳನ್ನೇ ಸಂಗ್ರಹಿಸಬೇಕೆಂಬ ಅಪೇಕ್ಷೆಯಿದ್ದಿತು. ಹೀಗಾಗಿ ಆಯ್ಕೆಯಲ್ಲಿ ಮತ್ತಷ್ಟು ಸ್ವಾತಂತ್ರ್ಯ ತಗ್ಗಿತು, ಉಪಲಬ್ಧವಾದ ಸಾಮಗ್ರಿಯೂ ಸೊರಗಿತು* ಆದುದರಿಂದ ಸಹೃದಯರು ಈ ಕೃತಿಯು ಯಾವ ಬಗೆಯ ಇತಿಮಿತಿಗಳಲ್ಲಿ ರೂಪಿತವಾಯಿತೆಂಬುದನ್ನು ಗಮನಿಸಬೇಕಾಗಿ ಕೋರಿಕೆ.

ಪ್ರಕೃತ ಸಂಕಲನವು ತನ್ನ ಆಕರಗಳಿಗಾಗಿ ಅನೇಕ ವ್ಯಕ್ತಿಗಳನ್ನೂ ಗ್ರಂಥಗಳನ್ನೂ ಆಶ್ರಯಿಸಿತು. ಗ್ರಂಥಋಣವನ್ನು ಪುಸ್ತಕದ ಕಡೆಯಲ್ಲಿ ನಿವೇದಿಸಿರುವುದರಿಂದ ಇಲ್ಲಿ ಕೇವಲ ವ್ಯಕ್ತಿಗಳ ಉಪಕಾರವನ್ನು ಸ್ಮರಿಸಬಹುದಾಗಿದೆ. ಬೆಂಗಳೂರಿನ ಪ್ರಸಿದ್ಧ ವಿದ್ವಾಂಸರಾದ ಶ್ರೀ ಎಸ್. ರಂಗನಾಥಶರ್ಮಾ, ಶ್ರೀ ಲಂಕಾ ಕೃಷ್ಣಮೂರ್ತಿ, ಶ್ರೀ ಟಿ. ಎಸ್. ಪದ್ಮನಾಭನ್, ಶ್ರೀ ಡಿ. ಆರ್. ವೆಂಕಟರಮಣನ್ ಮೊದಲಾದವರೂ, ಮೈಸೂರಿನ ವಿಶ್ರುತ ಪಂಡಿತರಾದ ಶ್ರೀ ಎಚ್.ವಿ. ನಾಗರಾಜರಾವ್, ಶ್ರೀ ಜಗನ್ನಾಥ್, ಡಾ॥ ಟಿ.ವಿ. ವೆಂಕಟಾಚಲ ಶಾಸ್ತ್ರೀ, ಡಾ॥ ಕೆ. ಕೃಷ್ಣಮೂರ್ತಿ ಮೊದಲಾದವರೂ, ಮೇಲುಕೋಟೆಯ ವಿದ್ವತ್ಕವಿ ಅರೈಯರ್ ಶ್ರೀರಾಮಶರ್ಮಾ ಅವರೂ ಸೇರಿದಂತೆ ಹಲವು ಹಸ್ತು ಮಹನೀಯರು ಪ್ರಸಂಗವಶಾತ್ ನನಗೆ ಹತ್ತಾರು ಚಾಟುಪದ್ಯಗಳನ್ನು ನೆನಪಿನಿಂದ ತೆಗೆದುಕೊಟ್ಟಿದ್ದಾರೆ. ಅವರಿತ್ತ ಎಲ್ಲ ಪದ್ಯಗಳನ್ನೂ ಈ ಮೊದಲೇ ತಿಳಿಸಿದ ನಾನಾ ಕಾರಣಗಳಿಂದಾಗಿ ಸದ್ಯದ ಕೆಲಸದಲ್ಲಿ ಅಳವಡಿಸಲಾಗಿಲ್ಲವಾದರೂ ಈ ಸಂಕಲನದ ಹಲವಾರು ಸೊಗಸಾದ ಚಾಟುಕಥಾಕವಿತೆಗಳು ಅವರ ಅನುಗ್ರಹದಿಂದಾಗಿ ಮೈಯ್ದಾಳಿವೆ. ಗ್ರಂಥಗಳ ಪೈಕಿ ತೆಲುಗು ಮತ್ತು ಸಂಸ್ಕೃತ ಭಾಷೆಯ ಕೃತಿಗಳು ಹೆಚ್ಚು ಸಹಾಯವನ್ನಿತ್ತಿವೆಯಾದರೂ ಕನ್ನಡ-ಹಿಂದೀ-ಮರಾಠಿ ಮತ್ತು ಮಲಯಾಳ ಪುಸ್ತಕಗಳೂ ಉಪಕರಿಸಿವೆ. ಈ ಎಲ್ಲ ಗ್ರಂಥಗಳ ಹಿಂದಿನ ಮನೀಷಿಗಳಿಗೂ ನನ್ನ ಕೃತಜ್ಞತಾಪೂರ್ವಕ ನಮಸ್ಕಾರಗಳು.

---

* ಹೇಗಾದರೂ ಕಾಲ ಕೂಡಿ ಬಂದಾಗ ಮತ್ತೊಂದು ವಿಸ್ತೃತ-ವಿಭಿನ್ನ ಸಂಕಲನವನ್ನೂ ತರಬೇಕೆಂದೂ ಹಂಬಲವಿದೆ. ಆದರಲ್ಲಿ ಈ ಕೃತಿಯ ಮಟ್ಟಿಗೆ ಪಾಠ್ಯವಾ. ನ್ಯೂನತಾದ್ಯೋತಕವಾ ಆದ ಅಂಶಗಳನ್ನೆಲ್ಲ ಸವರಿಕೊಂಡು ಹೊಂದಿಸಬೇಕೆಂದೂ ಮನೀಷೆಯುಂಟು. ಅದು ವಿಧಿಗೆ ವಾಸ್ತ ಆಪುಕ್ತವಾಗಿರಲಿಲ್ಲವೇ !

ಈ ಬರಹಗಳು ತಯಾರಾಗುತ್ತಿದ್ದಂತೆಯೇ ಮೇಜಿನ ಕಾವಲಿಯಿಂದ ಬಿಸಿ ಬಿಸಿ ಹಾಳೆಗಳನ್ನು ಆಸ್ವಾದ ಬುದ್ಧಿಯಿಂದ ಓದಿ ಆನಂದಿಸಿದ ಮಿತ್ರರು ಹಲವರು. ಅವರಲ್ಲಿ ತರುಣಸಖ ಶ್ರೀನಾಥ್ ಸ್ಮರಣೀಯರು. ನನ್ನ ತಾಯಿಯವರೂ ಇಲ್ಲಿಯ ಪ್ರಸಂಗಗಳನ್ನೋದಿ ಮೆಚ್ಚಿ ಆಶೀರ್ವದಿಸಿದ್ದಾರೆ. ಹಲವರು ವಿದ್ವನ್ಮಿತ್ರರು ನನ್ನ ಈ ಯತ್ನದ ಬೆಳವಣಿಗೆಯನ್ನು ಆಗಾಗ ವಿಚಾರಿಸಿ ಪ್ರೋತ್ಸಾಹದ ನುಡಿಗಳನ್ನಾಡಿದ್ದಾರೆ. ಅವರೆಲ್ಲರಿಗೂ ವಂದನೆಗಳು.

ಈ ಕಾಲದಲ್ಲಂತೂ ಗ್ರಂಥ ಪ್ರಕಟನೆ ಸಪ್ತ ಮಹಾಪಾತಕಗಳಲ್ಲೊಂದೇ ಬಂತಾಗಿಬಿಟ್ಟಿದೆ. 'ಕಂಟಕಾಂಜಲಿ'ಯಲ್ಲಿ ಕವಿಯು 'ಕಲ್ಯಾಣೀ ಯದಿ ತೇ ಸ್ಪೃಹಾಸ್ತಿ ಸುಮತೇ ಮಾ ಪುಸ್ತಕಂ ಲಿಖ್ಯತಾಂ' ಎಂದೇ ಎಚ್ಚರಿಸುತ್ತಾನೆ! ಅದರಲ್ಲಿಯೂ ಸಂಸ್ಕೃತವನ್ನು ಕುರಿತ, ವಿಶುದ್ಧಮಾರ್ಗದ ಕವಿಪಂಡಿತರ ಚಾಟುಕಥಾಕವಿತೆಗಳ ಕಂತೆ ಯಾರಿಗೆ ಬೇಕಾಗಿದೆ? ಇದೂ ಅಲ್ಲದೆ ಜಡೆಜಡೆಯಾಗಿ ಹೊಸೆದುಕೊಂಡ ನನ್ನ ವಾಕ್ಯಧೋರಣೆಯೇ ತೊಡಕಿನದು! ಹೀಗಿರುವಾಗ ಇದನ್ನೂ ನನ್ನ ಈ ಮೊದಲ ಕೃತಿ 'ನಿತ್ಯನೀತಿ'ಯಂತೆಯೇ ಆಸ್ಥೆಯಿಂದ ಪ್ರಕಾಶಿಸಲು ಮುಂದೆ ಬಂದ ಮಿತ್ರವರ ಶ್ರೀ ದಯಾಶಂಕರರ ಬಗೆಗೆ ಏನು ಹೇಳಲಿ? ಅವರ ನನ್ನ ಬಗೆಗಿನ ನಿರ್ಹೇತುಕ ಪ್ರೀತಿಗಾಗಿ ಮೌನೋಜ್ಜ್ವಲ ನಮಸ್ಸುಮಾಂಜಲಿಗಳನ್ನಷ್ಟೇ ಸಲ್ಲಿಸಿ ವಿರಮಿಸುವೆ.

—ಶತಾವಧಾನಿ ಆರ್. ಗಣೇಶ್

ಇಹ ನಿವಸತಿ ಮೇರುಃ ಶೇಖರಃ ಕ್ಷ್ಮಾಧರಾಣಾಂ
ಇಹ ವಿನಿಹಿತಭಾರಾಸ್ಸಾಗರಾಸ್ಸಪ್ತ ಚಾನ್ಯೇ ।
ಇದಮಹಿಪತಿಯೋಗಸ್ತಂಭ ವಿಭ್ರಾಜಮಾನಂ
ಧರಣಿತಲಮಿಹೈವ ಸ್ಥಾನಮಸ್ಮದ್ವಿಧಾನಾಂ ॥

ಮಹಾಕವಿ ಕಾಳಿದಾಸನನ್ನರಿಯದ ಭಾರತೀಯ ರಸಜ್ಞರಾರು ? ಈತ ಚಂದ್ರಗುಪ್ತ ವಿಕ್ರಮಾದಿತ್ಯನ ಆಸ್ಥಾನದಲ್ಲಿದ್ದನೆಂದು ಬಹು ವಿದ್ವಾಂಸರ ಅಭಿಮತ. ಕವಿಕುಲಗುರು ಕಾಳಿದಾಸನು ಮಹಾಪ್ರತಿಭಾಶಾಲಿಯಷ್ಟೇ ಅಲ್ಲದೆ ವಿಪುಲಪಾಂಡಿತ್ಯ, ಅಪಾರಲೋಕಜ್ಞತೆಗಳನ್ನುಳ್ಳ ಮೇಧಾವಿಯೂ ಹೌದು ; ರಾಜನೀತಿನಯ ಸೂಕ್ಷ್ಮಗಳನ್ನೂ ಬಲ್ಲವನಾಗಿದ್ದ.

ಒಮ್ಮೆ ಕುಂತಲದೇಶಕ್ಕೆ ರಾಜಕಾರಣವೊಂದನ್ನು ಸಂಬಂಧಿಸಿದಂತೆ ಕಾಳಿದಾಸನು ರಾಯಭಾರಿತ್ವ ವಹಿಸಿ ಹೊರಡಬೇಕಾಯಿತು. ಕುಂತಲ ದೇಶವು ಅಂದು ಕದಂಬ ವಂಶೀಯರಿಂದ ಪರಿಪಾಲಿತವಾಗಿ ಕನ್ನಡನಾಡೇ ಆಗಿತ್ತು. ಪ್ರಾಯಶಃ ಕದಂಬಭಗೀರಥನು ರಾಜನಾಗಿದ್ದನೆಂದು ತಿಳಿಯುತ್ತದೆ. ಸ್ವಲ್ಪ ಮಟ್ಟಿಗೆ ದರ್ಪಿಷ್ಠನಾಗಿದ್ದ ಈ ದೊರೆ ಆಸ್ಥಾನಕ್ಕೆ ದೌತ್ಯವನ್ನು ವಹಿಸಿ ಬಂದಿದ್ದ ರಸಋಷಿಯ ಮಹತ್ತ್ವವನ್ನರಿಯದೆ ಉಚಿತಾಸನದ ಗೌರವವನ್ನು ನೀಡದೆ ಅವಮಾನ ಮಾಡಬೇಕೆಂದು ಹಂಚಿಕೆ ಹೂಡಿ ಅಂತೆಯೇ ತನ್ನ ಆಸ್ಥಾನದಲ್ಲಿ ಕವಿಯು ಪ್ರವೇಶಿಸಿದಾಗ ಯಾವುದೇ ತೆರವಾಗಿದ್ದ ಆಸನವಿಲ್ಲದಂತೆ ಮಾಡಿದ್ದ. ಆದರೆ ಇಂಗಿತಜ್ಞನಾದ ಸರಸ್ವತೀ ಪುತ್ರನಿಗೆ ದೊರೆಯ ಅಂತರ್ಯ ತಿಳಿದು ಆ ಕೂಡಲೇ ಮೇಲಣ ಪದ್ಯವನ್ನು ಹೇಳಿ ನೆಲದಮೇಲೆಯೇ ಧೀರ ಗಾಂಭೀರ್ಯದಿಂದ ಕುಳಿತ.

"ಇಲ್ಲಿಯೇ ಬೆಟ್ಟಗಳೊಡೆಯ ಮೇರುವು ನಿಂತಿದ್ದಾನೆ. ಇಲ್ಲಿಯೇ ಸಪ್ತಸಾಗರಗಳೂ ಹರಡಿಕೊಂಡು ಭಾರವನ್ನಿಳಿಸಿವೆ. ಇದು ತಾನೆ ಆದಿಶೇಷನ ಹೆಡೆಯ ಆಧಾರದಿಂದ ಕಂಗೊಳಿಸಿದೆ. ಇಂಥ ಭೂಮಿಯಲ್ಲವೇ ನಮ್ಮಂಥವರಿಗೆ ಸರಿಯಾದ ಸ್ಥಾನ !"

ಈ ಮಾತಿನಿಂದ ಲಜ್ಜಿತನಾದ ದೊರೆ ಕ್ಷಮೆ ಕೇಳಿ ಕವಿಯನ್ನು ಸತ್ಕರಿಸಿ ಚಂದ್ರಗುಪ್ತನೊಡನೆ ಸಖ್ಯಬೆಳಸಿದನೆಂದು ತಿಳಿದು ಬರುತ್ತದೆ.

ಈ ರೋಚಕ ವೃತ್ತಾಂತದ ಅಂಶಗಳು ಕ್ಷೇಮೇಂದ್ರ, ಭೋಜ, ರಾಜಶೇಖರ ಮೊದಲಾದವರ ಅಲಂಕಾರಶಾಸ್ತ್ರಗ್ರಂಥಗಳಲ್ಲಿ ಬಂದು ಕಾಳಿದಾಸ ಕುತೂಹಲಿಗಳನ್ನು ಇಂದೂ ಕೆಣಕುತ್ತಿವೆ.

—೨—

ಶೀತೇನೋದ್ಧೂಷಿತಸ್ಯ ಮಾಷಶಿಮಿವಚ್ಚಿಂತಾರ್ಣವೇ ಮಜ್ಜತಃ
ಶಾಂತಾಗ್ನಿಂ ಸ್ಫುಟಿತಾಧರಸ್ಯ ಧಮತಃ ಕ್ಷುತ್ ಕ್ಷಾಮಕಂಠಸ್ಯ ಮೇ ।
ನಿದ್ರಾ ಕ್ವಾಪ್ಯವಮಾನಿತೇವ ದಯಿತಾ ಸಂತ್ಯಜ್ಯ ದೂರಂ ಗತಾ
ಸತ್ಪಾತ್ರಪ್ರತಿಪಾದಿತೇವ ವಸುಧಾ ನ ಕ್ಷೀಯತೇ ಶರ್ವರೀ ॥

ಕಾಶ್ಮೀರದ ಕವಿಗಳಲ್ಲಿ ಮಾತೃಗುಪ್ತನು ಗಣ್ಯನಾದವನು. ಇವನ ವಿಚಾರ ನಮಗೆ ಕಲ್ಹಣನ ರಾಜತರಂಗಿಣಿಯಿಂದಲೇ ತಿಳಿಯುತ್ತದೆ. ಬಾಲ್ಯದಿಂದಲೇ ದಾರಿದ್ರ್ಯ ಹಾಗೂ ಕವಿತ್ವಗಳು ಇವನಿಗಂಟಿಬಂದಿದ್ದವು. ಸದಾಶ್ರಯಾಭಿಲಾಷಿಯಾಗಿ ಹರ್ಷನೆಂಬ ನಾಮಾಂತರವುಳ್ಳ ವಿಕ್ರಮಾದಿತ್ಯನನ್ನು ಕಾಣಲು ಉಜ್ಜಯಿನಿಗೆ ಬಂದನು. ಅದೆಷ್ಟು ಯತ್ನಿಸಿದರೂ ಮೊದಲಿಗೆ ಆಸ್ಥಾನ ಪ್ರವೇಶವೇ ಕಷ್ಟವಾಗಿತ್ತು, ಆ ಬಳಿಕ ರಾಜಾನುಗ್ರಹವಂತೂ ಆಗಲೇ ಇಲ್ಲ. ಹೀಗೆಯೇ ದಿನಗಳುರುಳಿ ಮೊದಲೇ ಬಡತನದಲ್ಲಿದ್ದ ಮಾತೃಗುಪ್ತ ಮತ್ತಷ್ಟು ರಿಕ್ತತೆಗೀಡಾ ಕಂಗೆಟ್ಟ. ಆಗಂತೂ ಚಳಿಗಾಲ ತೀವ್ರವಾಗಿದ್ದಿತು.

ಒಂದು ರಾತ್ರಿ ಮಾತೃಗುಪ್ತನು ರಾಜಪ್ರಾಸಾದದ ಸಮೀಪ ಚಳಿಗೆ ನಡುಗುತ್ತಾ, ಹರುಕು ಮುರುಕಾಗಿ ಬೆಂಕಿಯನ್ನೊಟ್ಟಿ ಕುಳಿತಿದ್ದ. ರಾಜನು ಆ ವೇಳೆಗೆ ತನ್ನ ಪ್ರಾಸಾದದ ವಾತಾಯನದಿಂದ ಈತನನ್ನು ನೋಡಿ ಇದೇನವಸ್ಥೆ ಯೆಂದು ಪ್ರಶ್ನಿಸಲು ಕೂಡಲೇ ಕವಿಯು ಪ್ರತ್ಯುತ್ಪನ್ನಮತಿಯಾಗಿ ಮೇಲಣ ಕವಿತೆಯನ್ನು ಆಶುಧಾಟಿಯಲ್ಲಿ ಹೇಳುವುದರ ಮೂಲಕ ತನ್ನ ಸ್ಥಿತಿಯನ್ನೂ, ಮತಿಯನ್ನೂ ರಾಜನಿಗೆ ಮನವರಿಕೆ ಮಾಡಿಕೊಟ್ಟನು.

"ಉದ್ದಿನ ಕಾಳಿನಂತೆ ನಾನು ಮಂಜಿಗೆ ಉಜ್ಜಲ್ಪಡುತ್ತಿದ್ದೇನೆ, ಚಿಂತಾ ಸಮುದ್ರದಲ್ಲಿ ಮುಳುಗಿದ್ದೇನೆ. ನನ್ನ ತುಟಿಗಳು ಒಡೆವೆ; ಬೆಂಕಿ ಆರಿಹೋಗು ತ್ತಿರೆ, ಅದನ್ನು ತಿದ್ದಲು ನಾನು ಒಂದೇ ಸಮನೆ ಊದುತ್ತಿದ್ದೇನೆ. ಹಸಿವು ಬಾಯಾರಿಕೆಗಳಿಂದ ಗಂಟಲೊಣಗಿದೆ, ನಿದ್ರೆಯಂತೂ ಅವಮಾನಿತೆಯಾದ ಪತ್ನಿ ಯಂತೆ ದೂರ ಸರಿದಿದೆ; ಈ ರಾತ್ರಿಯಾದರೋ ಸತ್ಪಾತ್ರನಿಗೆ ಕೊಟ್ಟ ದಾನದಂತೆ ಕ್ಷೀಣಿಸುತ್ತಲೇ ಇಲ್ಲ !!"

ಇದನ್ನು ಕೇಳಿದ ಕೂಡಲೇ ವಸ್ತು ಸ್ಥಿತಿಯನ್ನರಿತ ವಿಕ್ರಮಾದಿತ್ಯ ಮಾತೃ ಗುಪ್ತನನ್ನು ಆದರಿಸಿದ್ದಷ್ಟೇ ಅಲ್ಲ, ಮುಂದೆ ಕಾಶ್ಮೀರಕ್ಕೂ ಅಧಿಪತಿಯನ್ನಾಗಿ ಮಾಡಿದ. ಅಂತೂ ಕವಿತೆ ರಾಜ್ಯವನ್ನೇ ಕೊಟ್ಟಿತು !

—೩—

ಶ್ವಶುರಗೃಹನಿವಾಸಃ ಸ್ವರ್ಗತುಲ್ಯೋ ನರಾಣಾಂ<br>
ಯದಿ ವಸತಿ ದಿನಾನಿ ತ್ರೀಣಿ ವಾ ಪಂಚ ಸಪ್ತ ।<br>
ಮಧುದಧಿಘೃತಧಾರಾಕ್ಷೀರಸಾರಪ್ರವಾಹಃ<br>
ತದುಪರಿ ದಿನಮೇಕಂ ಪಾದರಕ್ಷಾಪ್ರಯೋಗಃ ॥

ಸಂಸ್ಕೃತ ಸಾಹಿತ್ಯಾಕಾಶದಲ್ಲಿ ಭಾರವಿಯು ಭಾ–ರವಿಯೇ* ! ಒಂದೇ ಕೃತಿಯಿಂದ ಚಿರಸ್ಥಾಯಿಯಾದ ವಿರಳರಲ್ಲಿ ಅಗ್ರಗಣ್ಯನಿವನು. ಈತನ

* ಪ್ರಕಾಶವಾನವಾದ ಸೂರ್ಯ

ಕಿರಾತಾರ್ಜುನೀಯವು ಪಂಚಮಹಾಕಾವ್ಯಗಳಲ್ಲಿ ಮಧ್ಯಮಣಿಯಾಗಿ ರಾರಾಜಿಸಿ ಮುಂದೆ ಮಾಘಾದಿಯಾಗಿ ಸಮಸ್ತ ಕವೀಶ್ವರರಿಗೂ ದಾರಿದೀವಿಗೆಯಾಗಿ, ಮೇಲ್ಪಂಕ್ತಿಯ ಮಾದರಿಯಾಗಿ ಮೆರೆಯಿತು.

ಭಾರವಿಯ ಜನ್ಮನಾಮ ದಾಮೋದರನೆಂದು. ಈತನ ತಾರುಣ್ಯದ ಪ್ರತಿಭಾಕಾಂತಿಯನ್ನು ಕಂಡೂ ಕಾಣದವನಂತೆ ಇವನ ತಂದೆಯು ಎಲ್ಲರೆದುರು ತನ್ನ ಮಗ ಮಂದಮತಿಯೆಂದು ಹಳಿಯುತ್ತಿದ್ದನಂತೆ. ಇದರಿಂದ ಉಧ್ವಸ್ತನಾದ ದಾಮೋದರ ತಂದೆಯನ್ನೇ ಕೊಲ್ಲುವ ಮಟ್ಟಕ್ಕೆ ಬಂದುಬಿಟ್ಟ. ಅಂದು ರಾತ್ರಿ ತಂದೆಯು ದಾಮೋದರನನ್ನು ಕುರಿತು ಪತ್ನಿಯೊಡನೆ ಪ್ರಸ್ತಾಪಿಸುವಾಗ "ಪರೋಕ್ಷೇತನಯಾಃ ತಸ್ತುತ್ಯಾಃ!" ಎಂಬಂತೆ ಮಗನನ್ನು ಕೊಂಡಾಡುತ್ತಿದ್ದ. ಆಗ ದಾಮೋದರನು ತನ್ನಲ್ಲಿ ಅಹಂಕಾರವುಂಟಾಗಬಾರದೆಂದೇ ತನ್ನ ತಂದೆ ನಿಂದಿಸುತ್ತಿದ್ದನೆಂದು ತಿಳಿದು ಪಶ್ಚಾತ್ತಾಪದಗ್ಧನಾಗಿ ಮರುದಿನ ಅಧ್ಯಯನ ಕಾಲದಲ್ಲಿ ತಂದೆಯನ್ನು 'ಪಿತೃವಧಕ್ಕೆ ಸಂಕಲ್ಪಿಸಿದವನಿಗೇನು ದಂಡನೆ ?' ಎಂದು ಕೇಳಿದ. ಆತನ ತಂದೆ ಎಲ್ಲವನ್ನೂ ಊಹಿಸಿ 'ಆರು ತಿಂಗಳು ಮಾವನ ಮನೆಯಲ್ಲಿ ವಾಸ' ಎಂದು ಉತ್ತರಿಸಿದ. ದಾಮೋದರನು ಕೂಡಲೇ ತನ್ನ ಪತ್ನಿಯ ತೌರಿಗೆ ತೆರಳಿದ. ಅಲ್ಲಿ ಕೆಲದಿನಗಳು ಅಳಿಯನಿಗೆ ಸಲ್ಲುವ ರಾಜೋಪಚಾರಗಳ ಬಳಿಕ ಕ್ರಮೇಣ 'ಹಾಕುಮಣೆ-ನೂಕುಮಣೆ-ತಳ್ಳುಮಣೆ' ಸ್ಥಿತಿಯಾಗಿ ಈತನ ಗತಿ ಶೋಚನೀಯವಾಯಿತು. ಆಗ ಈ ಬಗೆಯ ಹೀನಾಯಗಳಿಂದ ನೊಂದ ಕವಿ ಮೇಲಣ ಮಾಲಿನೀವೃತ್ತವನ್ನು ಹೇಳಿದ.

"ಮನುಜರಿಗೆ ಮಾವನ ಮನೆಯವಾಸ ಸ್ವರ್ಗಸುಖವೇ ನಿಜ ; ಆದರೆ ಅದು ಕೇವಲ ಮೂರು ನಾಲ್ಕು ದಿನಗಳಿದ್ದರೆ ಮಾತ್ರ ; ಅಷ್ಟು ದಿನ ಮಾತ್ರ ಹಾಲುತುಪ್ಪ-ಜೇನು ಕೆನೆಗಳ ಹೊಳೆಹರಿಯುತ್ತದೆ. ಅದರ ಮೇಲೊಂದು ದಿನವಿದ್ದರೂ ಎಕ್ಕಡದ ಪೂಜೆಯೇ ಸಲ್ಲುತ್ತದೆ." ಭಾರವಿಯ ಈ ಅನುಭವ ವಾಕ್ಯದ ಸತ್ಯಾಸತ್ಯತೆ ಲೋಕಜೀವನದಲ್ಲಿದೆ.

ಐತಿಹ್ಯವೆಂಬಂತೆ ನಡೆದು ಬಂದ ಈ ಕಥೆಗೆ ಪ್ರತಿಕೂಲಾಧಾರಗಳಿಲ್ಲದ ಕಾರಣ ಪ್ರಾಯಶಃ ಭಾರವಿಯ ಜೀವನದಲ್ಲಿ ನಡೆದುದೇ ಆಗಿತ್ತೆನ್ನಬಹುದು.

—೪—

ಯಾಂ ಚಿಂತಯಾಮಿ ಸತತಂ ಮಯಿ ಸಾ ವಿರಕ್ತಾ
ಸಾಪ್ಯನ್ಯಮಿಚ್ಛತಿ ಜನೋಽಪ್ಯಯಮನ್ಯಸಕ್ತಃ
ಅಸ್ಮತ್ಕೃತೇ ಚ ಪರಿತುಷ್ಯತಿ ಕಾಚಿದನ್ಯಾ
ಧಿಕ್ತಾಂ ಚ ತಂ ಚ ಮದನಂ ಚ ಇಮಾಂ ಚ ಮಾಂ ಚ ॥

ಭರ್ತೃಹರಿಯ ಹೆಸರನ್ನು ಕೇಳದವರಾರು ? ನೀತಿ-ಶೃಂಗಾರ-ವೈರಾಗ್ಯ ಶತಕಗಳ ಅದ್ವಿತೀಯಕವಿಯಾಗಿ, ವ್ಯಾಕರಣ–ವೇದಾಂತಗಳ ನಿಧಿಯಾಗಿ ಚಿರಪರಿಚಿತ. ಈತನ ಬದುಕನ್ನು ಕುರಿತಂತೆ ನಾಟಕವೇ ರಚಿತವಾಗಿದೆ. ಈ ಸಂಗತಿಗಳ ಸತ್ಯಾಸತ್ಯತೆ ಏನಿದ್ದರೂ ಅವುಗಳು ಆತನ ವಿಲಕ್ಷಣ ಜೀವನಕ್ಕಂತೂ ಕನ್ನಡಿಯಾಗಿವೆ; ಆತನ ಅಪೂರ್ವ ಲೋಕಸಂಗ್ರಹಕ್ಕೆ ನಿದರ್ಶನವಾಗಿವೆ.

ಭರ್ತೃಹರಿ ರಾಜನಾಗಿದ್ದ. ಆಗಲೇ ಹಲವು ಗ್ರಂಥಗಳಿಂದ ಹೆಸರಾಗಿದ್ದ. ಒಮ್ಮೆ ಯತಿಯೊಬ್ಬ ಅಪೂರ್ವವಾದ ಚಿರಯೌವನಪ್ರದ ಫಲವೊಂದನ್ನು ಈತನಿಗೆ ಕೊಟ್ಟನು. ಪ್ರಿಯಪತ್ನಿಯಲ್ಲಿಯೇ ಜೀವಿತಸರ್ವಸ್ವವನ್ನುಳ್ಳ ರಾಜ ಆಕೆಗೆ ಈ ಹಣ್ಣನ್ನು ಕೊಟ್ಟನು. ರಾಣಿಯಾದರೋ ತನಗೆ ನಚ್ಚಿನವನಾದ ರಾಜೋದ್ಯೋಗಿಯೊಬ್ಬನಿಗಿದನ್ನು ಕೊಟ್ಟಳು. ಆತನು ತಾನೊಲಿದ ರಾಜ ನರ್ತಕಿಯ ಕೈಗಿತ್ತನು. ಅವಳು ತನಗೆ ಇಷ್ಟನಾದ ರಾಜನಿಗೆ ಇದನ್ನು ತಂದಿತ್ತಳು. ಹೀಗೆ ಹಣ್ಣು ಭರ್ತೃಹರಿಗೇ ಹಿಂದಿರುಗಿತ್ತು ! ಈ ಅಗಟವಿಗಟವನ್ನು ಕಂಡು ನಿರ್ವೇದವನ್ನು ಹೊಂದಿದ ರಾಜ ಸಂನ್ಯಸಿಸಿ ಮೇಲಣ ಪದ್ಯವನ್ನು ತನ್ನ ಪೂರ್ವಾಶ್ರಮದ ಚರಮಗೀತವೆಂಬಂತೆ ಹೇಳಿದ.

"ನಾನು ಯಾರನ್ನು ಸದಾ ಚಿಂತಿಸುವೆನೋ ಅವಳಿಗೆ ನಾನು ಬೇಡ; ಅವಳು ಬಯಸುವ ಪರಪುರುಷನು ಮತ್ತೊಬ್ಬಳನ್ನು ಬಯಸುತ್ತಾನೆ. ಆಕೆಯಾದರೋ ನನ್ನನ್ನು ಬಯಸುತ್ತಾಳೆ. ಛೀ! ಅವಳಿಗೂ, ಅವನಿಗೂ, ಇವಳಿಗೂ, ನನಗೂ, ಇದೆಲ್ಲಕ್ಕೂ ಮೂಲಹೇತುವಾದ ಕಾಮಕ್ಕೂ ಧಿಕ್ಕಾರ !!"

ಈ ಘಟನೆಯ ಬಳಿಕವೇ ಭರ್ತೃಹರಿಯು ವೈರಾಗ್ಯ ಶತಕ, ಅದ್ವೈತ ಗ್ರಂಥಗಳು (ಇವು ದೊರೆತಿಲ್ಲ) ಮೊದಲಾದ ರಚನೆಗಳಿಗೆ ತೊಡಗಿದನೆಂದು ಪ್ರತೀತಿ. ಸುಪ್ರಸಿದ್ಧವಾದ ವ್ಯಾಕರಣದರ್ಶನದ ಗ್ರಂಥ ವಾಕ್ಯಪದೀಯವೂ ಇವನದೆಂದು ಕೆಲವರ ಅಭಿಮತ.

—✽—

ಶುಷ್ಕೋ ವೃಕ್ಷಸ್ತಿಷ್ಠತ್ಯಗ್ರೇ ತದುಪರಿ ಕಶ್ಚಿತ್ಸರ್ಪೋಽಪ್ಯಸ್ತಿ ।
ನೀರಸ ತರುರಿಹ ವಿಲಸತಿ ನಿಕಟೇ ತದುಪರಿ ಮಣಿಮಯಕುಟಿಲಭುಜಂಗಃ॥

ಮಹಾಕವಿ ಬಾಣಭಟ್ಟನ ಹೆಸರು ಯಾವ ಸಂಸ್ಕೃತಪ್ರಿಯನಿಗೆ ತಾನೆ ತಿಳಿಯದು. ಸರಸ್ವತಿಯೇ ಪರಿಪೂರ್ಣತಾಪ್ರೀತಿಗಾಗಿ ಬಾಣನಾಗಿ ಜನಿಸಿದಳೆಂಬಷ್ಟರಮಟ್ಟಿಗೆ ಈತನ ಖ್ಯಾತಿ–ಕೀರ್ತಿ. ಇವನ ಮೇರುಕೃತಿ ಕಾದಂಬರಿ. ಇದನ್ನು ಮುಕ್ಕಾಲು ಭಾಗ ಮಾತ್ರ ಮುಗಿಸಿ ಪೂರ್ಣಮಾಡದೆಯೇ ಬಾಣಭಟ್ಟನು ದಿವಂಗತಿಸಿದ. ಆಗ ಉತ್ತರಭಾಗವಿಲ್ಲದೆ ಊನವಾದ ಕೃತಿಯನ್ನು ಕಂಡು ಸಹೃದಯರು ನಿರಾಶರಾಗುತ್ತಿದ್ದರಂತೆ. ಇದನ್ನು ಕಂಡ ಬಾಣನ ಮಕ್ಕಳಿಬ್ಬರೂ ತಂದೆಯ ಮಹಾಕೃತಿಗೆ ಆತನ ಕಲ್ಪನಾನುಸಾರವಾದ ಮುಗಿತಾಯವನ್ನು ಕಲ್ಪಿಸಲೆಳಸಿದರು. ಆದರೆ ಇಬ್ಬರಲ್ಲಿ ಯಾರಿಗೆ ಈ ಸದವಕಾಶ? ಗುರುವಿನ ಬಳಿ ಈರ್ವರೂ ತೆರಳಿ ತಮ್ಮ ಆಶಯವನ್ನು ಹೇಳಿ ನಿರ್ಣಯವನ್ನು ಕೋರಿದರಂತೆ. ಆಗ ಗುರುವು ಇಬ್ಬರಿಗೂ ಎದುರಿಗೆ ಕಾಣುವ ದೃಶ್ಯವೊಂದನ್ನು ಕವಿತಾರೂಪದಲ್ಲಿ ವರ್ಣಿಸಲು ಕೋರಿದ. ಈರ್ವರೂ ಮೇಲಿನ ಪಂಜರಿಕಾ

ಪದ್ಯದ ಪೂರ್ವಾರ್ಧ-ಉತ್ತರಾರ್ಧಗಳನ್ನು ಕ್ರಮವಾಗಿ ಹೇಳಿದರು. ಅರ್ಥವೊಂದೇ—'ಒಣಗಿದ ಮರವೊಂದು ಎದುರಿಗಿದೆ. ಅದರ ಮೇಲೊಂದು ಹಾವು ಬಳಸಿಕೊಂಡಿದೆ' ಶಬ್ದಗಳಲ್ಲಿ ಮಾತ್ರ ಶಯ್ಯಾಪ್ರಸ್ತಾರ ವಿಭಿನ್ನವಾಗಿತ್ತು. ದೊಡ್ಡವನು ಕರ್ಕಶ ಶಬ್ದಗಳಲ್ಲಿ ಕೇವಲ ವಾರ್ತಾಪ್ರಾಯವಾಗಿ ಹೇಳಿದರೆ ಚಿಕ್ಕವನು ಇಂಪಾದ ಪದಗಳಲ್ಲಿ ವಿಶಿಷ್ಟರೀತಿಯಿಂದ ವರ್ಣಿಸಿದ್ದ. 'ನೀರಸ' 'ಮಣಿಮಯ' 'ಕುಟಿಲ' 'ಭುಜಂಗ' ಮೊದಲಾದ ಪದಗಳಲ್ಲಿ ವಕ್ರತೆಯನ್ನೂ ತಂದಿದ್ದ. ಹೀಗಾಗಿ ಗುರುವು ದ್ವಿತೀಯನಿಗೇ ಅದ್ವಿತೀಯವಾದ ಕಾದಂಬರೀ ಪೂರಣದ ಕಾರ್ಯವನ್ನೊಪ್ಪಿಸಿದನಂತೆ. ಆದುದರಿಂದಲೇ. ಭೂಷಣಭಟ್ಟನು 'ಕಾದಂಬರಿ'ಯ ಉತ್ತರಭಾಗದ ಕರ್ತೃವಾದನೆಂದು ಪ್ರತೀತಿ. ಭೂಷಣಭಟ್ಟನು ಬಾಣಭಟ್ಟನಂತೆ ವರಕವಿಯಲ್ಲದಿದ್ದರೂ ಕವಿ. ತನ್ನ ಇತಿ-ಮಿತಿಗಳನ್ನು ಬಲ್ಲವನಾಗಿ ವಿನಯದಿಂದಲೇ ಅದನ್ನು ತಿಳಿಸಿ ಮುಂದುವರೆದಿದ್ದಾನೆ; ತಂದೆಯ ಅನನುಕರಣೀಯ ಶೈಲಿಯನ್ನು ಬಹುಮಟ್ಟಿಗೆ ಅನುಕರಿಸುವುದರಲ್ಲಿ ಸಫಲನೂ ಆಗಿದ್ದಾನೆನ್ನಬಹುದು. ಅಂತೂ ಇವನಿಂದಾಗಿಯೇ ನಮಗೆ 'ಕಾದಂಬರಿ' ಪೂರ್ಣವಾಗಿ ದೊರೆತಿದೆ.

—೬—

ನೀಲೋತ್ಪಲದಲಶ್ಯಾಮಾಂ ವಿಜ್ಜಿಕಾಂ ಮಾಮಜಾನತಾ ।<br>
ವೃಥೈವ ದಂಡಿನಾ ಪ್ರೋಕ್ತಾ ಸರ್ವಶುಕ್ಲಾ ಸರಸ್ವತೀ ॥

ಕನ್ನಡಿಗರ ಹೆಮ್ಮೆಯ ಚಕ್ರವರ್ತಿ ಇಮ್ಮಡಿ ಪುಲಕೇಶಿ ಚಾಲುಕ್ಯ ಸಾಮ್ರಾಜ್ಯವನ್ನು ನರ್ಮದೆಯವರೆಗೂ ವಿಸ್ತರಿಸಿ, ಶ್ರೀಹರ್ಷನನ್ನೂ ಸೋಲಿಸಿ ದಕ್ಷಿಣಾಪಥಪರಮೇಶ್ವರನೆಂದು ವಿಖ್ಯಾತನಾದದ್ದು ಇತಿಹಾಸದಲ್ಲಿ ಚಿರಪರಿಚಿತ. ಆದರೆ ಈ ಮಹಾರಾಜನ ಸೊಸೆಯೊಬ್ಬಳು ತನ್ನ ಸಾಹಿತ್ಯ ಸಾಮ್ರಾಜ್ಯವನ್ನು ಆಸೇತುಶೀತಾಚಲ ವಿಸ್ತರಿಸಿ ಕಾಳಿದಾಸನ ಅನಂತರ ವೈದರ್ಭೀಶೈಲಿಯ ಸಂಸ್ಕೃತಕವಿತಾನಿರ್ಮಿತಿಗೆ ತಾನೇ ತವರುಮನೆಯೆಂಬ

ಖ್ಯಾತಿಯನ್ನು ರಾಜಶೇಖರಾದಿ ಮಹಾಕವಿಗಳಿಂದ ಪಡೆದು ಚಿರಕಾಲ ಧವಳ ಕೀರ್ತಿಗಳಿಸಿದ ಸಂಗತಿ ಹೆಚ್ಚಿನ ಕನ್ನಡಿಗರಿಗೆ ತಿಳಿಯದು. ಚಂದ್ರಾದಿತ್ಯನ ಪತ್ನಿಯಾಗಿ, ಆಡಳಿತದಲ್ಲಿಯೂ ಪರಿಣತಳಾಗಿ ದಕ್ಷಮಹಿಳೆಯೆನಿಸಿದ ವಿಜ್ಜಿಕೆ (ಈಕೆಯನ್ನು ವಿಜಯಾ, ವಿಜಯಾಂಬಿಕೆ, ವಿಜ್ಜಿಕೆ, ವಿಜ್ಞಾಕೆ, ವಿಜ್ಞಾ ಎಂಬ ಹಲವು ನಾಮಗಳಿಂದ ಗುರುತಿಸುತ್ತಾರೆ ; ವಿದ್ಯಾ ಎಂಬ ನಾಮಾಂತರವೂ ಉಂಟು) ತುಂಬ ಅಭಿಮಾನವತಿ ಮತ್ತು ಆತ್ಮವಿಶ್ವಾಸವುಳ್ಳ ಧೀರೆ.

ಸಂಸ್ಕೃತದ ಸರಸಗದ್ಯಕವಿವರನೂ, ಪ್ರಥಮ ಪಂಕ್ತಿಯ ಆಲಂಕಾರಿಕನೂ ಆದ ದಂಡಿಯು ತನ್ನ 'ಕಾವ್ಯಾದರ್ಶ'ದಲ್ಲಿ ಸರಸ್ವತಿಯನ್ನು 'ಸರ್ವಶುಕ್ಲೆ' (ಸರ್ವಾಂಗ ಧವಳೆ) ಎಂದು ಸ್ತುತಿಸಿದ್ದಾನಷ್ಟೆ.* ಈತನ ಸಮಕಾಲೀನೆಯೂ ಪ್ರಾಯಶಃ ಸಲುಗೆಯ ಪರಿಚಯವುಳ್ಳ ಕವಯಿತ್ರಿಯೂ ಆದ ವಿಜ್ಜಿಕೆ ಇದನ್ನು ತಿಳಿದು ತನ್ನ ಪ್ರತಿಕ್ರಿಯೆಯನ್ನು ಮೇಲಿನ ಶ್ಲೋಕದ ಮೂಲಕ ಹೀಗೆ ತಿಳಿಯ ಪಡಿಸಿದ್ದಾಳೆ. "ಕನ್ನೈದಿಲೆಯಂತೆ ನಸುಗಪ್ಪಾದ ನನ್ನನ್ನು ತಿಳಿಯದೆ ದಂಡಿಯು ವ್ಯರ್ಥವಾಗಿ ಸರಸ್ವತಿಯನ್ನು ಸರ್ವಶುಕ್ಲೆಯೆಂದು ವರ್ಣಿಸಿದ್ದಾನೆ !"

ಈ ಪ್ರೌಢೋಕ್ತಿಯಿಂದ ನಮ್ಮ ಕನ್ನಡನಾಡಿನ ಹೆಮ್ಮೆಯ ಕಬ್ಬಿಗಿತಿ ತಾನೇ ಸರಸ್ವತಿಯೆಂದು ಧ್ವನಿಸಿದ್ದಾಳಲ್ಲವೇ ! ಸಂಸ್ಕೃತಸಾಹಿತ್ಯದಲ್ಲಿ ಈ 'ಶ್ಯಾಮಲ ಶಾರದೆ'ಯ ಸೂಕ್ತಿರತ್ನಗಳು ಇನ್ನೂ ಅಚ್ಚಳಿಯದಂತಿವೆ.

---

* ದಂಡಿಯ 'ಕಾವ್ಯಾದರ್ಶ' ದ ಪ್ರಾರಂಭದ.
ಚತುರ್ಮುಖಮುಖಾಂಭೋಜವನಹಂಸವಧೂರ್ಮಮ ।
ಮಾನಸೇ ರಮತಾಂ ನಿತ್ಯಂ ಸರ್ವಶುಕ್ಲಾ ಸರಸ್ವತೀ ॥ (1-1)

— ೭ —

ಕಾಲೇ ಮಾಷಂ ಸಸ್ಯೇ ಮಾಸಂ ವದತಿ ಶಕಾಸಂ ಯಶ್ಚ ಸಕಾಶಂ ।
ಉಷ್ಟ್ರೇ ಲುಂಪತಿ ಷಂ ವಾ ರಂ ವಾ ತಸ್ಮೈ ದತ್ತಾ ವಿಕಟನಿತಂಬಾ ॥

ಕಾಶ್ಮೀರವು ಅನಾದಿಕಾಲದಿಂದಲೂ ಸರಸ್ವತೀವಿಭ್ರಮಜನ್ಮಭೂಮಿ. ಸಂಸ್ಕೃತದ ಸರ್ವಾಂಗೀಣಾಭ್ಯುದಯಕ್ಕೆ ಕಾಶ್ಮೀರದ ಕೊಡುಗೆ ಅಪಾರ. ಇಲ್ಲಿಯ ಪ್ರವರಪುರದಲ್ಲಿ ಸುಮಾರು ಕ್ರಿ.ಶ.ಏಳನೆಯ ಶತಮಾನದಲ್ಲಿ ರಸವತ್ಕವಿತಾನಿಧಿಯಾದ ವಿದ್ವತ್ಕವಯಿತ್ರಿಯೊಬ್ಬಳು ಆಗಿಹೋದಳು. ಆಕೆಯ ಹೆಸರು ವಾಸ್ತವವಾಗಿ ತಿಳಿಯದಾದರೂ ಮೇಲಿನ ಪಂಜರಿಕಾ ಪದ್ಯದಲ್ಲಿ ಬಂದ ವಿಕಟನಿತಂಬೆಯೆಂಬ ಗೇಲಿಯ ಹೆಸರೇ ಖ್ಯಾತವಾಗಿದೆ.

ಗೋವಿಂದಸ್ವಾಮಿಯೆಂಬ ವಿದ್ವಾಂಸನಿಂದ ತರ್ಕ-ವ್ಯಾಕರಣ-ಸಾಹಿತ್ಯ ವಿದ್ಯೆಗಳನ್ನು ತಿಳಿದುಕೊಂಡು ಸರಸಕವಿತೆಯಲ್ಲಿ ಅನವದ್ಯ ಪಾಟವವನ್ನು ಪಡೆದ ಈಕೆಗೆ ದುರ್ದೈವದಿಂದ ನಿರಕ್ಷರಕುಕ್ಷಿಯಾದವನು ಪತಿಯಾಗಿ ಗಂಟುಬಿದ್ದ ! ರುದ್ರಟ, ವಾಮನ, ಭೋಜ, ರುಯ್ಯಕ, ಜಲ್ಹಣ, ಶಾರ್ಙ್ಗಧರ ಮೊದಲಾದ ಮಹಾಽಽಲಂಕಾರಿಕರ, ಸುಭಾಷಿತಸಂಕಲನಕಾರರ ಗೌರವಕ್ಕೆ ಪಾತ್ರಳಾಗಿ ರಾಜಶೇಖರಾದಿ ಮಹಾಕವಿಗಳಿಂದ ಕೀರ್ತಿತಳಾದ ಈಕೆಗೆ ವಿಧಿ ಮಾಡಿದ ಕ್ರೂರವಿಡಂಬನವಿದು ! ಇದನ್ನು ತಿಳಿದು ಆಕೆಯ ಸಖಿಯೊಬ್ಬಳು ವಿಷಾದ ಹಾಸ್ಯಗರ್ಭಿತವಾದ ಮೇಲ್ಕಂಡ ಪದ್ಯವನ್ನು ಹಾಡಿದಳಂತೆ. ಇದನ್ನು ನಮಿಸಾಧುವೆಂಬ ಆಲಂಕಾರಿಕ ವಿವರಿಸಿದ್ದಾನೆ. ಈ ಪದ್ಯದಲ್ಲಿ ವಿಕಟನಿತಂಬೆಯ ಗಂಡನ ಹೆಡ್ಡತನದ ಭಾಷಿಕವೈಪರೀತ್ಯ ವರ್ಣಿತವಾಗಿದೆ.

"ಕಾಲಸಂಬಂಧಿತವಾದ 'ಮಾಸ'(ತಿಂಗಳು)ದಲ್ಲಿ 'ಮಾಷ' ಎಂಬ ಉಚ್ಚಾರ, ಧಾನ್ಯಸಂಬಂಧಿತವಾದ 'ಮಾಷ'(ಉದ್ದಿನಕಾಳು)ದಲ್ಲಿ 'ಮಾಸ' ಎಂಬ ಉಚ್ಚಾರ; 'ಸಕಾಶ' (ಹತ್ತಿರ) ಎನ್ನಲು 'ಶಕಾಸ' ಎಂದು ಸ-ಶಪಲ್ಲಟೀಕರಣ, 'ಉಷ್ಟ್ರ' (ಒಂಟೆ) ಎನ್ನುವಾಗ ಷವೊತ್ತನ್ನೋ ರವೊತ್ತನ್ನೋ ಬಿಟ್ಟು

ಬಿಟ್ಟು 'ಉಟ್ರ' ಎಂದೋ 'ಉಷ್ಟ್ರ' ಎಂದೋ ನುಡಿಯುವ ಜಾಣ್ಮೆ! ಇಂಥ ವಾಕ್ಚಾತುರ್ಯವುಳ್ಳಾತನಿಗೆ ವಿಕಟನಿತಂಬೆಯನ್ನು ಕೊಟ್ಟರು!!"

—೮—

ತಾತ ಬಾಹಟ! ಮಾ ರೋದೀಃ ಏಷಾ ವೈ ಕರ್ಮಣೋ ಗತಿಃ।
ದುಷಿ ಧಾತೋರಿವಾಸ್ಮಾಕಂ ಗುಣೋ ದೋಷಾಯ ಕಲ್ಪ್ಯತೇ॥

ಸಂಸ್ಕೃತಸಾಹಿತ್ಯದ ಪ್ರತಿಭಾಶಾಲಿನಿಯರಾದ ಕವಯಿತ್ರಿಯರಲ್ಲಿ ಒಬ್ಬಳು ವಿಕಟನಿತಂಬೆ. ಈಕೆಯ ಪೂರ್ಣಪ್ರಮಾಣದ ಕೃತಿ ಯಾವುದೂ ಉಳಿದಿಲ್ಲ. ಕೇವಲ ಮುಕ್ತಕಗಳಿಂದ ಮಾತ್ರ ಖ್ಯಾತಿ ಪಡೆದಿದ್ದಾಳೆ. ಈಕೆಯ ಜೀವಿತವು ಒಂದು ವಿಕಟವಿಷಾದಗಾಥೆ. ಹೆಡ್ಡನಾದ ಗಂಡನನ್ನೊಲ್ಲದ ಆತನಿಂದ ದೂರಾಗಿ ಓಡಿ ಬಂದು ಕಾಶಿಯಲ್ಲಿ ವಾರಾಂಗನೆಯ ಛದ್ಮದಿಂದ ನೆಲೆನಿಂತ ಈಕೆಯನ್ನು ಹುಡುಕುತ್ತಾ ಕಾಶ್ಮೀರದಿಂದ ಇವಳ ತಂದೆ ಬಾಹಟನು ಬಂದು ಕಡೆಗೆ ಇವಳ ಸ್ಥಿತಿಗತಿಯನ್ನರಿತು ಲೋಕದೃಷ್ಟಿಯಿಂದ ಮಗಳು ಪತಿತೆಯಾದಳೆಂದೆನಿಸಿದಳಲ್ಲಾ ಎನ್ನುತ್ತಾ ದುಃಖಿಸಿದಾಗ ವಿಕಟನಿತಂಬೆಯು ತಂದೆಗೆ ಸಮಾಧಾನ ಹೇಳುತ್ತಾ ಮೇಲಣ ಶ್ಲೋಕವನ್ನು ಆಶುವಾಗಿ ಕವನಿಸಿದಳಂತೆ.

"ತಂದೆ ಬಾಹಟ! ದುಃಖಿಸಬೇಡ. ಇದನ್ನು ತಾನೆ ಕರ್ಮದ ವಿಚಿತ್ರಗತಿ ಎನ್ನುತ್ತಾರೆ. 'ದುಷ್' ಧಾತುವಿಗೆ 'ಗುಣ'ವು ಸೇರಿದರೆ 'ದೋಷ' ಎಂಬ ಶಬ್ದವು ನಿಷ್ಪನ್ನವಾಗುವಂತೆಯೇ ನಮ್ಮ ಗುಣಗಳೆಲ್ಲವೂ ಕರ್ಮವಿಪಾಕದಿಂದಾಗಿ ದೋಷಗಳಾಗಿ ಬಿಟ್ಟವೆ".

ಟಿಪ್ಪಣಿ :- 'ಪುಗಂತಲಘೂಪಧಸ್ಯ ಚ'(VII-3-86) ಎಂಬ ಪಾಣಿನಿಸೂತ್ರದಿಂದಾಗಿ 'ದುಷ್' ಧಾತುವಿಗೆ ಗುಣವು ಬಂದಾಗ 'ದೋಷ' ಎಂಬ ಶಬ್ದರೂಪದ ಸಿದ್ಧಿಯಾಗುತ್ತದೆ.

ಅತ್ಯಂತ ಮಾರ್ಮಿಕವಾದ ಈ ಸಂದರ್ಭದಲ್ಲಿ ಮೂಡಿದ ಕವಿತೆ ತುಂಬ ಹೃದಯಸ್ಪರ್ಶಿ ಮಾತ್ರವಲ್ಲದೆ ವ್ಯಾಕರಣಚಮತ್ಕಾರವನ್ನೂ ಹೊಂದಿದೆ. ಗೋವಿಂದಸ್ವಾಮಿಯಂಥ ಪಂಡಿತನ ಬಳಿ ಪಾಣಿನೀಯವನ್ನು ವಿಕಟನಿತಂಬೆಯು ಚೆನ್ನಾಗಿ ಅಭ್ಯಸಿಸಿದ್ದಳೆಂದು ತಾನಾಗಿಯೇ ಸ್ಫುರಣೆಯಾಗುತ್ತದೆ.

—೯—

ಐಶ್ವರ್ಯಮದಮತ್ತೋಽಸಿ ಮಾಮವಜ್ಞಾಯ ವರ್ತಸೇ ।
ಉಪಸ್ಥಿತೇಷು ಬೌದ್ಧೇಷು ಮದಧೀನಾ ತವ ಸ್ಥಿತಿಃ ॥

ಉದಯನಾಚಾರ್ಯರು ನ್ಯಾಯ-ವೈಶೇಷಿಕ ಶಾಸ್ತ್ರದ ಪರಮಾಚಾರ್ಯರು. ದರ್ಭಾಂಗದ ಬಳಿಯ ಕಮಲಾನದೀತೀರದ ಮಂಗರೌನೀ ಗ್ರಾಮದಲ್ಲಿ ಜನಿಸಿದ ಈ ಮಹಾಪಂಡಿತ ಕ್ರಿ.ಶ. 984ರ ಸಮೀಪದಲ್ಲಿದ್ದರು. ನಾಸ್ತಿಕದರ್ಶನವೆಂಬ ಕುಖ್ಯಾತಿ ಪಡೆದಿದ್ದ ತರ್ಕವನ್ನು ಆಸ್ತಿಕಪಥಕ್ಕೆ ತಂದ ಶ್ರೇಯಸ್ಸು ಇವರದು. ವಿಶೇಷತಃ ಪ್ರಬಲರಾದ ಬೌದ್ಧತಾರ್ಕಿಕರ ತೀವ್ರವಾದಧಾಟಿಯನ್ನು ಸಮರ್ಥವಾಗಿ ಎದುರಿಸಿ ವೈದಿಕ ನ್ಯಾಯ ಪರಂಪರೆಯನ್ನು ಪ್ರಬಲವಾಗಿ ಬೆಳೆಸಿದರು.

ಕಲ್ಯಾಣರಕ್ಷಿತನ 'ಈಶ್ವರಭಂಗಕಾರಿಕಾ' ಗ್ರಂಥದ ಖಂಡನೆಯಾಗಿ ನ್ಯಾಯ ಕುಸುಮಾಂಜಲಿ, ಧರ್ಮೋತ್ತರಾಚಾರ್ಯನ 'ಕ್ಷಣಭಂಗಸಿದ್ಧಿ'ಯ ಪ್ರತ್ಯುತ್ತರವಾಗಿ ಆತ್ಮತತ್ತ್ವವಿವೇಕ, ಪ್ರಶಸ್ತಪಾದ ಭಾಷ್ಯಕ್ಕೆ ವ್ಯಾಖ್ಯಾನವಾಗಿ ಕಿರಣಾವಲಿ, ನೈಯಾಯಿಕಬೋಧಗಾಗಿ ನ್ಯಾಯವಾರ್ತಿಕತಾತ್ಪರ್ಯಟೀಕಾಪರಿಶುದ್ಧಿಯೇ ಮೊದಲಾದ ಮಹಾಕೃತಿಗಳನ್ನು ರಚಿಸಿದ ಉದಯನಾಚಾರ್ಯರ ಮೇರುಸಾಧನೆ 'ನ್ಯಾಯಕುಸುಮಾಂಜಲಿ'.

ಇಂಥ ವಾದೀಭಸಿಂಹರೊಮ್ಮೆ ಪುರಿಯ ಜಗನ್ನಾಥನ ದರ್ಶನಕ್ಕೆ ಹೋದಾಗ ಅದೇನೋ ತೊಡಕಾಗಿ ಗರ್ಭಗೃಹವನ್ನು ಮುಚ್ಚಲಾಯಿತು. ದೈವ

ದರ್ಶನವಾಗದುದರಿಂದ ಕುಪಿತರಾದ ಆಚಾರ್ಯರು ಕೂಡಲೇ ಆವೇಶದಿಂದ ಮೇಲಿನ ಶ್ಲೋಕವನ್ನು ಹೇಳಿದರು.

"ಸಿರಿಯ ಮದದಿಂದ ಗರ್ವಿತನಾಗಿ ನನ್ನನ್ನು ಅನಾದರದಿಂದ ನೋಡುತ್ತಿರುವೆಯಾ ! ಜಗನ್ನಾಥ !! ಬೌದ್ಧರು ಎದುರಾದಾಗ (ತಮ್ಮ ನಿರೀಶ್ವರ-ನಿರಾತ್ಮ-ಕ್ಷಣಿಕ-ವಿಜ್ಞಾನವಾದಗಳಿಂದ ನಾಸ್ತಿಕ್ಯವನ್ನು ತಾರ್ಕಿಕವಾಗಿ ಪ್ರತಿಪಾದಿಸುತ್ತಾ) ನಿನ್ನ ಪರಿಸ್ಥಿತಿ ನನ್ನ ಅಧೀನದಲ್ಲಿರುವುದು ! (ಅಂದರೆ ತಾನು ವಾದಿಸಿ ಬೌದ್ಧರನ್ನು ಗೆಲ್ಲಬೇಕು. ಇಲ್ಲವಾದಲ್ಲಿ ಜಗನ್ನಾಥನನ್ನೇ ಬೌದ್ಧರು ಇಲ್ಲವಾಗಿಸುತ್ತಾರೆ !)"

ಕೂಡಲೇ ಬಾಗಿಲು ತಾನಾಗಿ ತೆರೆದುಕೊಂಡು ದರ್ಶನವಾಯಿತು ! ಪಾಂಡಿತ್ಯವೀರಕ್ಕೆ ಫಲ ದೊರೆತಿತ್ತು !!

—೧೦—

ಗೋವಿಂದನಂದನತಯಾ ಚ ವಪುಃಶ್ರಿಯಾ ಚ
ಮಾಸ್ಮಿನ್ ನೃಪೇ ಕುರುತ ಕಾಮಧಿಯಂ ತರುಣ್ಯಃ ।
ಅಸ್ತ್ರೀಕರೋತಿ ಜಗತಾಂ ವಿಜಯೇ ಸ್ಮರಃ ಸ್ತ್ರೀಃ
ಅಸ್ತ್ರೀ ಜನಃ ಪುನರನೇನ ವಿಧೀಯತೇ ಸ್ತ್ರೀ ॥

ಶ್ರೀಹರ್ಷಮಹಾಕವಿಯು ಸಂಸ್ಕೃತಸಾಹಿತ್ಯದ ಪಾಂಡಿತೀ ಪ್ರೌಢಿಮೆಯ ಚರಮಸೀಮೆ. ಆತನ ನೈಷಧೀಯಚರಿತವು ಪಂಚಮಹಾಕಾವ್ಯಗಳಲ್ಲಿ ಕಡೆಯ ರತ್ನ. ಪ್ರಚಂಡತಾರ್ಕಿಕನೂ, ಅಶೇಷಪ್ರತಿಭಾನ್ವಿತನೂ ಆದ ಈತನು ಹನ್ನೆರಡನೆಯ ಶತಾಬ್ದದಲ್ಲಿದ್ದ. ಶ್ರೀಹೀರ ಮತ್ತು ಮಾಮಲ್ಲ-(ಅಥವಾ ಮಲ್ಲ) ದೇವಿಯರ ಮಗ. ತಂದೆಯು ಕಾನ್ಯಕುಬ್ಜೇಶ್ವರ ಜಯಚಂದ್ರನ ಆಸ್ಥಾನ ವಿದ್ವಾಂಸ ಉದಯನಾಚಾರ್ಯನಿಂದ ವಾದದಲ್ಲಿ ಸೋತು ಮಗನಿಂದ ತನ್ನ ಪರಾಜಯಾಪಮಾನಕ್ಕೆ ಪ್ರತೀಕಾರವಾಗಬೇಕೆಂದು ಆತನನ್ನು ಮಹಾಪಂಡಿತನನ್ನಾಗಿ ಮಾಡಿದ. ಅಲ್ಲದೆ ಶ್ರೀಹರ್ಷನು ಚಿಂತಾಮಣಿದೇವಿಯನ್ನು

'ಚಿಂತಾಮಣಿ ಮಂತ್ರ'ದಿಂದ ಒಲಿಸಿಕೊಂಡು ಬ್ರಾಹ್ಮೀಮೂರ್ತಿಯೇ ಆದ. ಆ ಬಳಿಕ ತಂದೆಯ ಪ್ರತ್ಯರ್ಥಿಯನ್ನೆದುರಿಸಲು ಕಾನ್ಯಕುಬ್ಜ ರಾಜಾಸ್ಥಾನಕ್ಕೆ ಅಡಿಯಿರಿಸಿದ.

ಸಭೆಯನ್ನು ಪ್ರವೇಶಿಸುತ್ತಿದ್ದಂತೆಯೇ ಸ್ಫಟಿಕ ರುದ್ರಾಕ್ಷಮಣಿಮಂಡಿತವಾದ ದಕ್ಷಿಣಭುಜವನ್ನೆತ್ತಿ ರಾಜನನ್ನು ಆಶೀರ್ವದಿಸುತ್ತಾ ಅವಾರಿತಾಶುಧಾರಾಧೌರೇಯತೆಯಿಂದ ಮೇಲಣ ವಸಂತತಿಲಕವೃತ್ತದ ಪ್ರಶಂಸಾಪದ್ಯವನ್ನು ಹೇಳಿದ.

"ಗೋವಿಂದನಂದನನು ಈತನೇಂದೂ (ಜಯಚಂದ್ರನ ತಂದೆ ಗೋವಿಂದ ಚಂದ್ರ; ಗೋವಿಂದ= ಹಸುಗಳನ್ನು ಕಾಪಾಡುವ ನಂದಗೋಪ, ಆತನ ನಂದನ ಶ್ರೀಕೃಷ್ಣ ಎಂದೂ ಅರ್ಥಾಂತರ) ಸುಂದರನೆಂದೂ ಈ ರಾಜನಲ್ಲಿ ಪ್ರಣಯವನ್ನು, ತರುಣಿಯರೇ ! ಮಾಡಬೇಡಿ. ಜಗತ್ತನ್ನು ಮೋಹಗೊಳಿಸಲು ಮದನನು ಸ್ತ್ರೀಯರನ್ನು ಅಸ್ತ್ರವನ್ನಾಗಿಸುತ್ತಾನೆ. ಆದರೆ ಈ ರಾಜನು ಅಸ್ತ್ರೀ ಜನರನ್ನೇ (ಆಯುಧ ಹಿಡಿದವರನ್ನೇ, ಅಂದರೆ ವೈರಿಗಳನ್ನು) ಸ್ತ್ರೀಯರನ್ನಾಗಿ (ಯುದ್ಧದಲ್ಲಿ ಹೇಡಿಗಳನ್ನಾಗಿ) ಮಾಡುತ್ತಾನೆ !!"

ಸಭಂಗ–ಅಭಂಗಶ್ಲೇಷೆ, ವಿರೋಧಾಭಾಸಾಲಂಕಾರ, ವಕ್ರೋಕ್ತಿಗಳಿಂದ ವಿದ್ವದೌಷಧವೂ, ರಸಿಕರಸಾಯನವೂ ಆಗ ಈ ಪದ್ಯಕ್ಕೆ ಮಾರುಹೋಗಿ ಜಯಚಂದ್ರ, ಶ್ರೀಹರ್ಷನನ್ನು ಆದರಿಸಿದ.

—೧೧—

ಸಾಹಿತ್ಯೇ ಸುಕುಮಾರವಸ್ತುನಿ ದೃಢನ್ಯಾಯಗ್ರಹಗ್ರಂಥಿಲೇ<br>
ತರ್ಕೇ ವಾ ಮಯಿ ಸಂವಿಧಾತರಿ ಸಮಂ ಲೀಲಾಯತೇ ಭಾರತೀ ।<br>
ಶಯ್ಯಾ ವಾಸ್ತು ಮೃದೂತ್ತರಚ್ಛದವತೀ ದರ್ಭಾಂಕುರೈರಾಸ್ತೃತಾ<br>
ಭೂಮಿರ್ವಾ ಹೃದಯಂಗಮೋ ಯದಿ ಪತಿಸ್ತುಲ್ಯಾ ರತಿರ್ಯೋಷಿತಾಂ॥

ಶ್ರೀಹರ್ಷ ಮಹಾಕವಿಯು ತನ್ನ ತಂದೆಯ ವಿವ್ಯಾಪರಾಭವೋಪಶಾಂತಿಗಾಗಿ ಸರ್ವಶಾಸ್ತ್ರಪಾರೀಣತೆಯನ್ನು ಹೊಂದಿ ಜಯಚಂದ್ರನ (ಈತನನ್ನು

ಜಯಂತ ಚಂದ್ರ ಎಂದೂ ಕರೆದಿದ್ದಾರೆ.) ಆಸ್ಥಾನಕ್ಕೆ ಬಂದು ರಾಜನನ್ನು ಮೆಚ್ಚಿಸಿ ಉದಯನಾಚಾರ್ಯನನ್ನು ವಾದಕ್ಕೆ ಕರೆದನು. (ಈ ಉದಯನಾಚಾರ್ಯನು ಇದೇ ಹೆಸರಿನ ಇತಿಹಾಸಪ್ರಸಿದ್ಧ ತಾರ್ಕಿಕನಲ್ಲ.) ಆಗ ಆ ಪ್ರತಿವಾದಿ ಪಂಡಿತನು ಶ್ರೀಹರ್ಷನನ್ನು ಮೃದುಮಧುರವಾದ ಸ್ತ್ರೈಣಗುಣವುಳ್ಳ ಕವಿತೆಯನ್ನು ಕಟ್ಟಿದಂತಲ್ಲ, ತನ್ನೊಡನೆ ತರ್ಕಕರ್ಕಶಶಾಸ್ತ್ರವಾದವೆಂದು ಸೂಕ್ಷ್ಮವಾಗಿ ವಿಡಂಬಿಸಲು ಆ ಕೂಡಲೇ ಚಿಂತಾಮಣಿ ಮಂತ್ರಸಿದ್ಧನಾದ ಶ್ರೀಹರ್ಷನು ಮೇಲಣ ಶಾರ್ದೂಲವಿಕ್ರೀಡಿತ ವೃತ್ತವನ್ನು ಹೇಳಿದ.

-ಸುಕುಮಾರ ವಸ್ತುಪ್ರಸ್ತುತವಾದ ಸಾಹಿತ್ಯದಲ್ಲಿಯೇ ಆದರೂ, ದೃಢವಾಗಿ ಕಠಿನತೆಯನ್ನು ಹೊಂದಿ ಗಂಟುಗಂಟಾದ ತರ್ಕದಲ್ಲಿಯೇ ಆದರೂ ಸಮಸಮನಾಗಿ ನನ್ನ ಸಾರವತ್ತಾದ ವಾಕ್ಕು ವೀರವಿಹಾರವನ್ನು ಮಾಡುತ್ತದೆ ಪತಿಯು ತನಗೊಲಿದವನಾದರೆ ಹಂಸತೂಲಿಕಾತಲ್ಪದಲ್ಲಾಗಲೀ, ಚುಚ್ಚುವ ದರ್ಭಾಸ್ತರಣದಲ್ಲಾಗಲೀ ನಾರಿಯರು ಸಮಾನ ಸೌಖ್ಯವನ್ನು ಕೊಡುವರಲ್ಲವೇ !"

ಈ ತೀವ್ರಶರಧಾಟಿಯ, ಮಾರ್ಮಿಕ ನಿದರ್ಶನವನ್ನುಳ್ಳ ಆತ್ಮವಿಶ್ವಾಸ ವಚನಗಳನ್ನು ಕೇಳಿ ನಿಬ್ಬೆರಗಾದ ಪ್ರತಿವಾದಿ ತಾರ್ಕಿಕನು ವಾದವಿಲ್ಲದೆಯೇ ಸೋಲನ್ನೊಪ್ಪಿ ಪ್ರಶಸ್ತಿಪದ್ಯಗಳನ್ನರ್ಪಿಸಿದನೆಂದು ಐತಿಹ್ಯವಿದೆ.

ಪಂಚಮಹಾಕಾವ್ಯಕರ್ತೃಗಳಲ್ಲಿ ಶ್ರೀಹರ್ಷನಂಥ ಪಂಡಿತ ಮತ್ತೊಬ್ಬ ನಿಲ್ಲ. ಈತನ ತರ್ಕ-ವೇದಾಂತಗಳ ಅದ್ಭುತಶಕ್ತಿಯನ್ನು ಕಾಣಲು ಇವನು ರಚಿಸಿದ ಅದ್ವೈತವೇದಾಂತಪರವಾದ 'ಖಂಡನ ಖಂಡಖಾದ್ಯ' ಎಂಬ ಗ್ರಂಥವನ್ನು ನೋಡಬಹುದು. ಈತನಿಗಾಗಿ ಜಯಚಂದ್ರನು ಎರಡೆರಡು ತಾಂಬೂಲಗಳನ್ನು ಕೊಟ್ಟು, ಅಗ್ರಾಸನದ ಗೌರವವನ್ನು ನೀಡಿ ನಮಿಸುತ್ತಿದ್ದನೆಂದು ತಿಳಿಯುತ್ತದೆ.

—೧೨—

ಅಶೇಷಶೇಮುಷೀಮೋಷಂ ಮಾಷಮಶ್ನಾಮಿ ಮಾತುಲ ।
ಬಿಂಬವಲ್ಲೀವಿತಾನಾಧಃ ಪಿಬಾಮಿ ದಧಿ ಮಾಹಿಷಂ ॥

ವಿಂಧ್ಯವಾಸಿನೀದೇವಿಯ ಕೃಪೆಯಿಂದಾಗಿ ಅಶೇಷಪ್ರೌಢಿಯನ್ನು ಶ್ರೀಹರ್ಷನು ಪಡೆದ ಬಳಿಕ ಆತನು ರಚಿಸಿದ ಕವಿತೆಯಾಗಲಿ, ಶಾಸ್ತ್ರವಾಗಲಿ ಯಾವ ಪಂಡಿತರಿಗೂ ತಿಳಿಯದಷ್ಟು ಕಠಿನವಾಯಿತು. ಆಗ ಈ ಬಗೆಯ ಅತಿರೇಕದಿಂದ ನೊಂದ ಶ್ರೀಹರ್ಷನು ಪುನಃ ದೇವಿಯನ್ನು ಬೇಡಿ ತನ್ನ ಬುದ್ಧಿ ಮತ್ತೆಯನ್ನು ತಗ್ಗಿಸಿಕೊಳ್ಳಲು ಉಪಾಯವನ್ನು ತಿಳಿದ! ಬಳಿಕ ಅದನ್ನು ಅನುಷ್ಠಿಸಲು ಆರಂಭಿಸಿದ. ಹಾಗಿರಲು ಒಮ್ಮೆ ಈ ಬಗ್ಗೆ ಆತನ ವಿಚಿತ್ರ ಚರ್ಯೆಗಳನ್ನು ಕಂಡ ಅವನ ಸೋದರಮಾವನ್ನು (ಈತ ಕಾಶ್ಮೀರದ ಆಲಂಕಾರಿಕ ಸಾರ್ವಭೌಮ ಮಮ್ಮಟನೆಂದೂ ಕೆಲವರ ಅಭಿಪ್ರಾಯ) ಇದೇನೆಂದು ಕೇಳಲು ಕವಿಯು ಮೇಲಣ ಶ್ಲೋಕವನ್ನು ಹೇಳಿದ.

"ಅಪಾರವಾದ ಬುದ್ಧಿಯನ್ನು ತಗ್ಗಿಸಲು ಉದ್ದಿನಕಾಳನ್ನು ತಿನ್ನುತ್ತಿದ್ದೇನೆ, ತೊಂಡೆ ಬಳ್ಳಿಯ ಚಪ್ಪರದ ಕೆಳಗೆ ಎಮ್ಮೆಯ ಮೊಸರು ಕುಡಿಯುತ್ತಿದ್ದೇನೆ" (ಉದ್ದು, ಎಮ್ಮೆಯ ಮೊಸರು ಮೊದಲಾದುವು ಮಾಂದ್ಯ ಪದಾರ್ಥಗಳೆಂದು ವಿದಿತು.) ವಿಶೇಷವೇನೆಂದರೆ ಈ ಶ್ಲೋಕವೂ ತಕ್ಕಮಟ್ಟಿಗೆ ಅನುಪ್ರಾಸಗಳಿಂದ ಪೆಡಸಾಗಿಯೇ ಇದೆ! ಹೀಗೆ 'ದಡ್ಡ'ನಾದ ಬಳಿಕ ಶ್ರೀಹರ್ಷನು ಬರೆದ ನೈಷಧೀಯಚರಿತ, ಖಂಡನಖಂಡಖಾದ್ಯಾದಿಗಳೇ ಕಬ್ಬಿಣದ ಕಡಲೆಗಳಾಗಿ ವಿದ್ವದೌಷಧವೆನಿಸಿವೆ. ಪ್ರಾಯಶಃ ಆತನ ಇತರ ಕೃತಿಗಳಾದ ಸ್ಥೈರ್ಯವಿಚಾರಣ, ವಿಜಯಪ್ರಶಸ್ತಿ, ಗೌಡೋರ್ವೀಶ ಕುಲ ಪ್ರಶಸ್ತಿ, ಛಂದಪ್ರಶಸ್ತಿ, ಅರ್ಣವವರ್ಣನ, ಶಿವಶಕ್ತಿಸಿದ್ಧಿ, ನವಸಾಹಸಾಂಕ ಚರಿತ ಚಂಪೂವೇ ಮೊದಲಾದುವು ಈಗ ಅನುಪಲಬ್ಧವಾಗಿರುವುದಕ್ಕೆ ಅವುಗಳು ಸಮಕಾಲೀನರಿಗೆ ದುರ್ಬೋಧವಾದದ್ದೇ ಕಾರಣವೇನೋ !!

ಈತನ ನೈಷಧೀಯಚರಿತವನ್ನು ಕಂಡಮೇಲೆ ಎಲ್ಲಿಯ ಮಾಘ, ಎಲ್ಲಿಯ ಭಾರವಿ ಎಂದೆನ್ನಿಸುವುದೇದು ಪಂಡಿತ ಮತ! ಹೀಗೆ ಸಂಸ್ಕೃತ ಸಾಹಿತ್ಯದ ಪಾಂಡಿತ್ಯಾತಿರೇಕದ ಮಹಾಪ್ರತಿನಿಧಿ ಶ್ರೀಹರ್ಷ.

—೧೩—

ಕಾವ್ಯಪ್ರಕಾಶೋ ಯವನಃ ಕಾವ್ಯಾಲೀ ಚ ಕುಲಾಂಗನಾ ।
ಅನೇನ ಪ್ರಸಭಾಕೃಷ್ಟಾ ಕಷ್ಟಾಮೇಷಾಽಶ್ನುತೇ ದಶಾಂ ॥

ಮಹಾಕವಿ ಶ್ರೀಹರ್ಷನು ವಿಂಧ್ಯವಾಸಿನೀದೇವಿಯ ಕೃಪೆಯಿಂದ ಅಸಾಧಾರಣ ವಾಗ್ಧಾಟಿಯನ್ನು ಪಡೆದು ಬಳಿಕ ಅದನ್ನು ಪ್ರಯತ್ನಪೂರ್ವಕವಾಗಿ ತಗ್ಗಿಸಿಕೊಂಡು, ಅವನ ದೃಷ್ಟಿಯಲ್ಲಿ 'ಸರಳ'ವಾದ 'ನೈಷಧೀಯಚರಿತ' ಮಹಾಕಾವ್ಯವನ್ನು ಬರೆದ ಕಥೆಯನ್ನು ಈ ಮುನ್ನವೇ ತಿಳಿದಿದ್ದಾಯಿತಷ್ಟೆ! ಈ ಕಾವ್ಯವನ್ನು ಬರೆದೊಡನೆಯೇ ಅದನ್ನು ವಾಗ್ದೇವತೆಯ ಅವರಾವತಾರವೆಂದು ಖ್ಯಾತನಾದ ಕಾಶ್ಮೀರದ ಆಲಂಕಾರಿಕ ಶಿಖಾಮಣಿ ಮಮ್ಮಟನಿಗೆ ತೋರಿಸಲು ಮುಂದಾದನಂತೆ. (ಮಮ್ಮಟನು ಶ್ರೀಹರ್ಷನ ಸೋದರಮಾವನೆಂದೂ ಪ್ರಥೆಯುಂಟು). ಶ್ರೀಹರ್ಷನ ಕಾವ್ಯವನ್ನು ಕಂಡೊಡನೆಯೇ ಮಮ್ಮಟನು 'ಅಯ್ಯೋ! ಈ ಕೃತಿ ಕೆಲವು ಕಾಲದ ಮುನ್ನವೇ ನನಗೆ ಸಿಕ್ಕಿದ್ದರೆ ಎಷ್ಟು ಒಳಿತಾಗುತ್ತಿತ್ತು!!' ಎಂದು ಉದ್ಗರಿಸಿದನಂತೆ ಕೂಡಲೇ ಹೆಮ್ಮೆಯಿಂದ ಶ್ರೀಹರ್ಷನು ಕಾರಣವೇನೆಂದು ಕೇಳಲು ಮಮ್ಮಟನು 'ನನ್ನ ಕಾವ್ಯಪ್ರಕಾಶದ ದೋಷ ಪ್ರಕರಣವನ್ನು ರಚಿಸುವಾಗ ತಕ್ಕ ದೋಷ ನಿದರ್ಶನಗಳಿಗಾಗಿ ತುಂಬ ಹುಡುಕಾಡಬೇಕಾಯಿತು. ಈ ನಿನ್ನ ಕಾವ್ಯ ಮೊದಲೇ ಸಿಕ್ಕಿದ್ದರೆ ಅಷ್ಟೂ ದೋಷಗಳಿಗೆ ಇಲ್ಲಿಂದಲೇ ಪುಷ್ಕಲವಾಗಿ ಉದಾಹರಣೆಗಳು ಶ್ರಮವಿಲ್ಲದೆ ದೊರೆಯುತ್ತಿದ್ದವಲ್ಲಾ!' ಎಂದನಂತೆ! ಈ ಗೇಲಿಯ ಮಾತನ್ನು ಕೇಳಿ ಶ್ರೀಹರ್ಷನು ಕಂಪಿತನಾಗಿ ಈ ಮೊದಲೇ ಕಾವ್ಯಪ್ರಕಾಶದಲ್ಲಿ ತಾನು ಗಮನಿ

---

ಟಿಪ್ಪಣಿ :- ಮಮ್ಮಟನ ಕಾವ್ಯಪ್ರಕಾಶವು ಅಲಂಕಾರ ಶಾಸ್ತ್ರದಲ್ಲಿ ಆಚಾರ್ಯಕೃತಿ. ಇದರ ಸಪ್ತಮೋಲ್ಲಾಸವು ಅತಿವಿಸ್ತಾರವಾದ ದೋಷಪ್ರಕರಣವನ್ನು ಒಳಗೊಂಡು ಮಮ್ಮಟನ ನಿಶಿತದೋಷದೃಕ್ಕಿಗೆ ಸಾಕ್ಷಿಯಾಗಿದೆ. ನೈಷಧೀಯಚರಿತದ ಅತ್ಯುತ್ಕೃಷ್ಟಮಹಾಕಾವ್ಯವೇ ಎಂದೂ ಮಾದರಿಕಲ್ಪನೆ. ಅತಿಪ್ರೌಢಶೈಲಿ, ಅಪ್ರಸಿದ್ಧ ಪದ ಗೂಢಪದ ಅದ ವ್ಯಾಕರಣ ಪ್ರಯೋಗ, ಅತಿಶಯ ಚಮತ್ಕಾರಗಳಿಂದಾಗಿ ತುಂಬ ಕಠಿನವೆನಿಸುವ ಪ್ರಕೃತದಲ್ಲಿ ತಾತ್ಪರ್ಯ. ಈ ಬಗೆಯ ಅತಿಕ್ಲಿಷ್ಟ ಕೆಲವು ದೋಷವೇ ಎಂಬುದು ಕೆಲವರ ಅಭಿಮತ.

ಸಿದ್ಧ ಮಮ್ಮಟನ ಅರಸಿಕತೆಯನ್ನೂ, ಪ್ರಸ್ತುತ ಪ್ರಸಂಗದ ದೋಷೈಕ ದೃಷ್ಟಿಯನ್ನೂ ವಿಡಂಬಿಸುವ ಮೇಲಣ ಶ್ಲೋಕವನ್ನು ಆಶುವಾಗಿ ಹೇಳಿದನಂತೆ.

"ಕಾವ್ಯಪ್ರಕಾಶವು (ಅದರ ಕರ್ತೃವೂ ಸಹ) ಒಬ್ಬ ಧೂರ್ತಯುವಕನೇ ಸರಿ. ಇನ್ನು ಕವಿತೆಯಾದರೋ ಸುಂದರಿಯಾದ ಸತ್ಕುಲವನಿತೆ. ಇಂಥ ನೀಚನ ಕೈಗೆ ಸಿಕ್ಕು ಗಾಸಿಗೊಂಡ ಕವಿತಾಂಗನೆಯು ತುಂಬ ಕಷ್ಟಕ್ಕೆ ಒಳಗಾಗಿದ್ದಾಳೆ"

ಇಲ್ಲಿಯ ಘಟನೆಯ ಸತ್ಯಾಸತ್ಯತೆಯ ಚರ್ಚೆಗಿಂತಲೂ ನಮಗೆ ಹೆಚ್ಚು ಪ್ರಸ್ತುತವಾದದ್ದು ಕವಿ-ವಿಮರ್ಶಕರ ಮನೋವೃತ್ತಿಗಳು.

—೧೪—

ರೇ ರೇ ಗ್ರಾಮಕುವಿಂದ ! ಕಂದಲತಯಾ ವಸ್ತ್ರಾಣ್ಯಮೂನಿ ತ್ವಯಾ
ಗೋಣೀವಿಭ್ರಮಭಾಜನಾನಿ ಶತಶೋಽವ್ಯಾತ್ಮಾ ಕಿಮಾಯಾಸ್ಯತೇ।
ಅಪ್ಯೇಕಂ ರುಚಿರಂ ಚಿರಾದಭಿನವಂ ವಾಸಸ್ತದಾಸೂತ್ರ್ಯತಾಂ
ಯನ್ನೋಜ್ಝಂತಿ ಕುಚಸ್ಥಲಾತ್ ಕ್ಷಣಮಪಿ ಕ್ಷೋಣೀಭೃತಾಂ ವಲ್ಲಭಾಃ ॥

ಗುರ್ಜರ ರಾಜನಾದ ವೀರಧವಲನ ಆಸ್ಥಾನದಲ್ಲಿದ್ದ (ಕ್ರಿ.ಶ. 12ನೆಯ ಶತಾಬ್ದ) ಹರಿಹರ ಮತ್ತು ಮದನ ಎಂಬ ವಿದ್ವತ್ಕವಿಗಳಿಗೆ ಸದಾ ಸಾಸೂಯೆಯ ಸ್ಪರ್ಧೆ. ಮದನನೊಮ್ಮೆ 'ಹರಿಹರ ! ಪರಿಹರ ಗರ್ವಂ, ಕವಿರಾಜಗಜಾಂಕುಶೋಽಸ್ಮ್ಯಹಂ ಮದನಃ' (ಹರಿಹರ ! ಜಂಬವನ್ನು ಬಿಡು ! ನೀನು ಕವಿರಾಜನಾದರೆ ನಿನ್ನಂಥ ಮದ್ದಾನೆಗೆ ಅಂಕುಶವಾಗಿ ನಾನಿದ್ದೇನೆ) ಎಂದು ಪದ್ಯಾರ್ಧವನ್ನು ಹೇಳಲು ಕೂಡಲೇ ಹರಿಹರನು 'ಮದನ ! ವಿಮುದ್ರಯ ವದನಂ; ಹರಿಹರ ಚರಿತಂ ಸ್ಮರಾತೀತಂ' (ಮದನ ! ಬಾಯಿಮುಚ್ಚು ! ಹರಿಹರನ ಚರಿತ್ರೆ ಮದನನಿಗೆ ಮೀರಿದ್ದು–ಅಥವಾ; ಶಿವನ ಕಥೆಯನ್ನು, ಹಿಂದಾದದ್ದನ್ನು ;

ಅಂದರೆ ಕಾಮದಹನವನ್ನು ಸ್ಮರಿಸಿಕೋ !) ಎಂದು ಉಳಿದರ್ಧವನ್ನು ರಭಸದಿಂದ ಪೂರೈಸುತ್ತಿದ್ದ. ಇಂಥ ಕವಿಕೆಯ ಮಲ್ಲರಿಗೆ ಒಮ್ಮೆ ರಾಜನು ಘಂಟಾಶತಕದ ರಚನೆಯ ಸ್ಪರ್ಧೆಯನ್ನೊಡ್ಡಿದ. ಅಂತೆಯೇ ಹರಿಹರ, ಮದನರಿಬ್ಬರೂ ಒಂದು ಗಂಟೆಯೊಳಗೆ ನೂರು ಪದ್ಯಗಳನ್ನು ರಚಿಸಲುದ್ಯುಕ್ತರಾದರು. ಈ ಸ್ಪರ್ಧೆಯಲ್ಲಿ ಮದನನೇ ಗೆದ್ದ. ಆಗ ಹರಿಹರನು ಜಟ್ಟಿ ಬಿದ್ದರೂ ಮೀಸೆ ಮಣ್ಣಾಗಲಿಲ್ಲವೆಂಬಂತೆ ಆಶುಧಾರೆಯ ಮೇಲಣ ಪದ್ಯವನ್ನು ಹೇಳಿದ. "ಎಲೋ ! ಹಳ್ಳಿಯ ನೇಯ್ಗೆಯವನೇ ! ಒಡ್ಡುತನದಿಂದ ಇಂಥ ನೂರಾರು ಗೋಣಿಯ ಚೀಲಗಳನ್ನು ನೇಯ್ದು ಸುಮ್ಮನೆ ಬಳಲಿದರೆ ಏನು ಭಾಗ್ಯ ಬಂದೀತು ? ರಾಣಿಯರು ಕ್ಷಣಕಾಲ ಕೂಡ ತಮ್ಮ ಎದೆಯ ಮೇಲಿನಿಂದ ಜಾರಿಸಲಿಷ್ಟಪಡದ ಒಂದೇ ಒಂದು ಸೊಗಸಾದ ರೇಷ್ಮೆಯ ವಸ್ತ್ರವನ್ನು ನೇಯುವ ಚಾತುರ್ಯವಿದ್ದರೆ ತೋರಿಸು ನೋಡೋಣ !!"

ಈ ರುಚಿರಾನ್ಯೋಕ್ತಿಯಿಂದ ಮದನನನ್ನು ಕೆಲಸಕ್ಕೆ ಬಾರದ ಕವಿತಾ ಕಂಥೆಗಳನ್ನು ನೇಯುವ ಗೊಡ್ಡು ಕಸುಬುದಾರನಷ್ಟೇ ಹೊರತು ಕುಶಲಶಿಲ್ಪಿಯಲ್ಲವೆಂದು ಎತ್ತಿ ಆಡಿದ ಹರಿಹರನ ವೈದಗ್ಧ್ಯ ಶ್ಲಾಘ್ಯ.

ಇಂಥ ಅಹಮಹಮಿಕೆಯ ಸ್ಪರ್ಧಾವರ್ಧಿತ ವಿದ್ವತ್ತಾ ವಿಕ್ರಮಕ್ಕೆ ಹಿಂದಿನ ಕಾಲದ ರಾಜಾಸ್ಥಾನಗಳೂ, ಪಂಡಿತ ಪರಿಷತ್ತುಗಳೂ ಅನುಕೂಲಕರ ವೇದಿಕೆಗಳಾಗಿದ್ದುವು.

—೧೫—

ನಿರರ್ಥಕಂ ಜನ್ಮಗತಂ ನಲಿನ್ಯಾ ಯಯಾ ನ ದೃಷ್ಟಂ ತುಹಿನಾಂಶುಬಿಂಬಂ ।
ಉತ್ಪತ್ತಿರಿಂದೋರಪಿ ನಿಷ್ಫಲೈವ ಕೃತಾ ವಿನಿದ್ರಾ ನಲಿನೀ ನ ಯೇನ ॥

ಸರಸ್ವತೀವಿಭ್ರಮಜನ್ಮಭೂಮಿಯಾದ ಕಾಶ್ಮೀರದ ಪ್ರಖ್ಯಾತನಗರ ಪ್ರವರಪುರ. ಇಲ್ಲಿ ಸ್ತ್ರೀಯರೂ ಶ್ರುತಿಸುಂದರ ಸಂಸ್ಕೃತಸಂಭಾಷಣ

ವಿದಗ್ಧೆಯರಾಗಿದ್ದರು. ಈ ಊರಿನ ಜ್ಯೇಷ್ಠಕಲಶ ಮತ್ತು ನಾಗದೇವಿಯರ ಮಧ್ಯಮ ಪುತ್ರನೇ ಮಹಾಕವಿ ಬಿಲ್ಹಣ. ವಿದ್ವತ್ಕವಿಯಾದ ಇವನು ವಿದ್ಯಾ ವಿಜಿಗೀಷೆಯಿಂದ ಅಖಿಲ ಭಾರತ ಸಂಚಾರ ಮಾಡಿದ. ಶಿವಭಕ್ತನಾಗಿದ್ದರೂ ಅನ್ಯಮತಸಹಿಷ್ಣು (ಈತನ 'ಕರ್ಣಸುಂದರೀ' ನಾಟಕೆಯಲ್ಲಿಯ ಜಿನಸ್ತುತಿಯೇ ಇದಕ್ಕೆ ಸಾಕ್ಷಿ). ತುಂಬ ಸ್ವಾಭಿಮಾನಿಯಾದ ಬಿಲ್ಹಣನು ಮಥುರಾ, ಬೃಂದಾವನ, ಸೋಮನಾಥ, ರಾಜಮಹೇಂದ್ರವರಂ, ಕಲ್ಯಾಣ ಮೊದಲಾದ ಎಡೆಗಳಲ್ಲೆಲ್ಲ ಪ್ರತಿವಾದಿಗಳನ್ನು ಗೆದ್ದು ಗೌರವ ಪಡೆದಿದ್ದ. ಇವನು ಸಂಚಾರ ಕಾಲದ ಲ್ಲೊಮ್ಮೆ ರಾಜನೊಬ್ಬನ ಅತಿಥಿಯಾಗಿದ್ದು ಆತನ ಮಗಳಿಗೆ ಸಂಸ್ಕೃತವನ್ನು ಹೇಳಲು ಒಪ್ಪಿದ. ಆ ಧೂರ್ತ ರಾಜನು ತನ್ನ ಕವಿತೆಯಷ್ಟೇ ರಮಣೀಯ ವಾದ ಕಾಶ್ಮೀರಕೇಸರಮನೋಹರಾಕಾರನಾದ ಬಿಲ್ಹಣನನ್ನು ರಾಜಕುಮಾರಿ ಕಂಡೊಡನೆಯೇ ಪ್ರೇಮಿಸಬಹುದೆಂದು ಅಂಜಿ ಬಿಲ್ಹಣನು ಕುರುಡನೆಂದೂ, ರಾಜಪುತ್ರಿ ಕುಷ್ಠರೋಗಿಷ್ಠೆಯೆಂದೂ ಉಪಾಯವಾಗಿ ಇಬ್ಬರಿಗೂ ತಿಳಿಸಿದ. ವಿಕಲಾಂಗರನ್ನೂ, ವಿಕೃತಾಂಗರನ್ನೂ ಬಿಲ್ಹಣನಾಗಲಿ, ರಾಜಪುತ್ರಿಯಾಗಲಿ ನೋಡುವುದಿಲ್ಲವೆಂದು ವ್ರತವಿದ್ದುದರಿಂದ ತೆರೆಯನ್ನೊಂದನ್ನು ಮಧ್ಯದಲ್ಲಿ ಎಳೆದು ರಾಜನು ಪಾಠಕ್ಕೆ ಅನುಕೂಲ ಮಾಡಿದ.

ಒಮ್ಮೆ ಶರದಾಕಾಶದಲ್ಲಿ ಪೂರ್ಣಚಂದ್ರನನ್ನು ಕಂಡು ಕವಿ ಮೈಮರೆತು ಆಶುಕವಿತೆಗಳನ್ನು ಚಿಮ್ಮಿಸಿದ. ಇದನ್ನು ಕೇಳಿ ರಾಜಪುತ್ರಿಯು ಅಂಧನು ಈ ರೀತಿ ಚಂದ್ರಿಕೆಯನ್ನು ವರ್ಣಿಸಬಲ್ಲನೇ ಎಂದು ಸಂಶಯ ತಳೆದು ವ್ರತ ಕೆಟ್ಟರೂ ಸರಿಯೇ ಎಂದು ತೆರೆಯನ್ನು ಸರಿಸಿದಳು. ಆ ಹೊತ್ತಿಗೆ ಬಿಲ್ಹಣ ಮೇಲಿನ ಉಪಜಾತಿ ಪದ್ಯದ ಪೂರ್ವಾರ್ಧವನ್ನು ಹೇಳುತ್ತಿದ್ದ ;

"ತಂಗದಿರನ ಬಿಂಬವನ್ನು ಕಾಣದ ತಾವರೆಯ ಜನ್ಮ ವ್ಯರ್ಥವಲ್ಲವೇ !" ರಾಜಕುಮಾರಿಯು ಕೂಡಲೇ ಪದ್ಯವನ್ನು ಪೂರಣಮಾಡಿದಳು. "ತಾವರೆಯ ನಿದ್ರೆಯನ್ನು ನೀಗದ ಚಂದ್ರನ ಜನ್ಮವು ನಿಷ್ಫಲವಲ್ಲವೇ !"

*ರಾಜಕುಮಾರಿಯು ತಾವರೆಗಣ್ಣಿನ ತರುಣ ಕವಿಯನ್ನು ಕಂಡಿದ್ದಳು. ಬಿಲ್ಹಣನೂ ಚಂದ್ರಿಕಾಛವಿಯ ಅರಸುಗುವರಿಯನ್ನು ಕಂಡ ! ಮುಂದೇನು ? ಅರಸನ ತಂತ್ರ ಮುರಿದುಬಿತ್ತು, ಸರಸ ಸಾಗಿತು.

—೧೬—

ಭಟ್ಟಿರ್ನಷ್ಟೋ ಭಾರವಿಶ್ಚಾಪಿ ನಷ್ಟೋ
ಭಿಕ್ಷುರ್ನಷ್ಟೋ ಭೀಮಸೇನೋಽಪಿ ನಷ್ಟಃ ।
ಭುಕ್ಕುಂಡೋಽಹಂ ಭೂಪತಿಸ್ತ್ವಂ ಹಿ ರಾಜನ್ ।
ಭಂಭಾವಲ್ಯಾಮಂತಕಸ್ಸನ್ನಿವಿಷ್ಟಃ ॥

ರಾಜಕುಮಾರಿಯ ಪ್ರೇಮಪಾಶದಲ್ಲಿ ಸಿಲುಕಿದ ಕ್ರಿ.ಶ. ಹನ್ನೊಂದನೆಯ ಶತಮಾನದ ಉತ್ತರಾರ್ಧದಲ್ಲಿದ್ದ ಬಿಲ್ಹಣಕವಿ ರಾಜನ ಉಗ್ರಶಾಸನಸ್ವರೂಪವನ್ನೇ ಗಮನಿಸಿರಲಿಲ್ಲ. ತನ್ನ ತಂತ್ರ ವ್ಯರ್ಥವಾಗಿ ಮಗಳು ಬಡಕಬ್ಬಿಗನಿಗೆ ಮನಸೋತದ್ದನ್ನು ಒಲ್ಲದ ರಾಜನು ಬಿಲ್ಹಣನಿಗೆ ಶಿರಶ್ಛೇದನ ದಂಡನೆ ವಿಧಿಸಿದ. ನಿರ್ಭೀತನಾಗಿ ಬಿಲ್ಹಣನು ಚಂಡಾಲರ ನಡುವೆ ಕೆಂಪುಡುಗೆ ಧರಿಸಿ, ರಕ್ತಮಾಲ್ಯಗಳೊಡನೆ ವಧ್ಯಭೂಮಿಗೆ ನಡೆದ. ದಾರಿಯಲ್ಲಿ ವಿಪ್ರಲಂಭಾವೇಶದಿಂದ ಶ್ರುತಿಸುಭಗ ವಸಂತತಿಲಕವೃತ್ತಗಳಲ್ಲಿ ತನ್ನ ಹಾಗೂ ರಾಜಪುತ್ರಿಯ ಪ್ರಣಯ ಪ್ರಸಂಗಗಳನ್ನು ರಸಗರ್ಭನಿರ್ಭರ ಪದಪದ್ಧತಿಯಿಂದ ಆಶುವಾಗಿ ಹಾಡ

---

ಟಿಪ್ಪಣಿ :- 'ಬಿಲ್ಹಣ ಕಾವ್ಯ' ಅಥವಾ 'ಬಿಲ್ಹಣೀಯ'ವೆಂಬ ಕಾವ್ಯವು 164 ಪದ್ಯಗಳಿರುವ ಲಘುಕೃತಿ.

* ಈ ರಾಜಕುಮಾರಿಯು ಗುಜರಾತಿನ ಪ್ರಾಂತದ ಮಹಾರಾಜನಾದ ವೀರಸಿಂಹನ ಮಗಳು ವಿದ್ಯುಲ್ಲೇಖಳೆಂಬವಳೆಂದು 'ಬಿಲ್ಹಣೀಯ'ವು ತಿಳಿಸುತ್ತದೆ. ಈ ಕೃತಿಯು ಕಾವ್ಯಮಾಲಾ ಪ್ರಕಟನೆಯ ಹದಿಮೂರನೆಯ ಗುಚ್ಛದಲ್ಲಿ ಪ್ರಕಟವಾಗಿದೆ.

ಲಾರಂಭಿಸಿದ (ಈ ಲಘು ಕಾವ್ಯವೇ 'ಚೋರ ಪಂಚಾಶಿಕಾ' ಎಂದು ವಿಖ್ಯಾತ ವಾಗಿದೆ). ಕಡೆಗೆ ರಾಜನಿಗೂ ಒಂದು ಸಂದೇಶ ಕಳುಹಿದ. ಅದೇ ಮೇಲಿನ ಶಾಲಿನೀವೃತ್ತದ ಚಾಟೂಕ್ತಿ.

"ಭಟ್ಟಿ (ಮಹಾ ವೈಯಾಕರಣ ಕವಿ) ಇಂದಿಲ್ಲ, ಭಾರವಿಯೂ (ಪಂಚ ಮಹಾಕಾವ್ಯ ಕರ್ತೃಗಳಲ್ಲೊಬ್ಬ) ಬದುಕಿಲ್ಲ. ಭಿಕ್ಷುವೂ (ಪ್ರಾಯಶಃ ಈತನೂ ಒಬ್ಬ ಕವಿ) ಇಲ್ಲ, ಭೀಮನೂ ಉಳಿದಿಲ್ಲ. ಭುಕ್ಕುಂಡನಾದ ನಾನು (ಬಿಲ್ಹಣನ ಮತ್ತೊಂದು ಹೆಸರು) ಸಾವಿನ ಅಂಚಿನಲ್ಲಿದ್ದೇನೆ. ರಾಜನೇ! ನೀನೂ ಭೂಪತಿ!! ಯಮನು ಭ-ಭಾ-ಭಿ-ಭೀ ಗುಣಿತಕ್ಕೆ ಬಂದಿದ್ದಾನೆ!" ಈ ಪದ್ಯದಿಂದ ತನ್ನ ಅನಂತರ ರಾಜನಿಗೂ ಸಾವು ತಪ್ಪಿದ್ದಲ್ಲವೆಂಬ ಚಾತುರ್ಯ ಧೈರ್ಯಗಳನ್ನು ತೋರಿಸಿದ ಕವಿಯನ್ನು ಮೆಚ್ಚಿ ಆ ರಾಜ ಆತನಿಗೇ ಮಗಳನ್ನು ಕೊಟ್ಟನೆಂದು ಪ್ರತೀತಿ.

ಕಾಶ್ಮೀರದ ಈ ಮಹಾಕವಿ ಮುಂದೆ ಕನ್ನಡನಾಡಿಗೆ ಬಂದು ಕಲ್ಯಾಣ ಕಟಕಾಧಿಪತಿ ಚಾಲುಕ್ಯ ವಿಕ್ರಮಾದಿತ್ಯನ ಆಸ್ಥಾನ ಕವಿಯಾಗಿ ವಿದ್ಯಾಪತಿ ಯೆಂಬ ಬಿರುದು ಪಡೆದು 'ವಿಕ್ರಮಾಂಕದೇವ ಚರಿತ'ವೆಂಬ ರಮಣೀಯ ಮಹಾ ಕಾವ್ಯವನ್ನು ತನ್ನೊಡೆಯನ ಜಯಗಾಥೆಯಾಗಿ ರಚಿಸಿದ. ರಾಜಕವಿ ಭೋಜ ನಿಂದಲೂ ಮೆಚ್ಚುಗೆ ಪಡೆದ ಬಿಲ್ಹಣನು ತನ್ನ ಕಡೆಯ ದಿನಗಳನ್ನು ಪ್ರಶಾಂತ ವಾಗಿ ಗಂಗಾತೀರದಲ್ಲಿ ಕಳೆದ.

—೧೭—

ಬಿಂದುದ್ವಂದ್ವತರಂಗಿತಾಗ್ರಸರಣಃ ಕರ್ತಾ ಶಿರೋಬಿಂದುಕಂ
ಕರ್ಮೇತಿ ಕ್ರಮಶಿಕ್ಷಿತಾನ್ವಯಕಲಾ ಯೇ ಕೇಽಪಿ ತೇಭ್ಯೋಽಂಜಲಿಃ ।
ಯೇ ತು ಗ್ರಂಥಸಹಸ್ರ ಶಾಣಕಷಣತ್ರುಟ್ಯತ್ಕಲಂಕೈರ್ಗಿರಾಂ
ಉಲ್ಲಾಸೈಃ ಕವಯಂತಿ ಬಿಲ್ಹಣಕವಿಸ್ತೇಷ್ವೇವ ಸನ್ನಹ್ಯತಿ ॥

ಕಾಶ್ಮೀರದ ಕವಿ ಬಿಲ್ಹಣನು ಜಿಗೀಷೆಯಿಂದ ದೇಶಾಟನೆ ಮಾಡುತ್ತಾ ವಿದರ್ಭ, ಮಾಲವ, ವೇಂಗಿ ಮೊದಲಾದ ಪ್ರಾಂತಗಳನ್ನು ಸುತ್ತಿ ಕನ್ನಡ

ನಾಡಿನ ಕಲ್ಯಾಣಕಟಕಕ್ಕೆ ಬಂದ. ಆಗ ಕಲ್ಯಾಣಚಕ್ರೇಶ್ವರನಾಗಿದ್ದವನು ಚಾಲುಕ್ಯವಂಶದ ಆರನೆಯ ವಿಕ್ರಮಾದಿತ್ಯ. ಈತ ಹೆಸರಿಗೆ ತಕ್ಕಂತೆ ತನ್ನ ಪರಾಕ್ರಮದಿಂದ ಅಖಿಲಭಾರತದಲ್ಲಿಯೇ ವಿಖ್ಯಾತನಾಗಿದ್ದ. ಈತನ ಆಸ್ಥಾನಕ್ಕೆ ಪ್ರವೇಶಿಸಲು ಬಿಲ್ಹಣನು ಅದೆಷ್ಟೋ ಶ್ರಮಿಸಬೇಕಾಯಿತು. ಆಗಲೂ ವಿದ್ಯಾಮತ್ಸರಿಗಳಾದ ಪಟ್ಟಭದ್ರಹಿತಾಸಕ್ತಿಯ ಪಂಡಿತರು ಇದ್ದೇ ಇದ್ದರು! ಕಡೆಗೊಂದು ಅಶ್ಲೀಲೋಪಮೆಯದಾದರೂ ಅತ್ಯಂತ ಮೊನಚಾದ ಶ್ಲೋಕವನ್ನು ರಚಿಸಿ ಆಸ್ಥಾನಕ್ಕೆ ಬಿಲ್ಹಣನು ಪ್ರವೇಶ ಪಡೆದನೆಂದು ಪ್ರತೀತಿ. ಬಳಿಕ ಆಸ್ಥಾನಕ್ಕೆ ಬಂದ ಆ ಆಗಂತುಕ ಕವಿಗೆ ರಾಜನು ಆತನ ಪಾಂಡಿತ್ಯಾದಿಗಳನ್ನು ವಿಚಾರಿಸಿ ಕವಿತಾಸಮರಕ್ಕಾಗಿ ತನ್ನ ಆಶ್ರಯದಲ್ಲಿರುವ ಎಂಥ ವಿದ್ವತ್ಕವಿಗಳನ್ನು ಆರಿಸಿಕೊಂಡು ಎದುರಿಸಲಿಚ್ಛಿಸುವಿಯೆಂದು ಕೇಳಿದಾಗ ಧೀರತೆಯಿಂದ ಬಿಲ್ಹಣ ಮೇಲಣ ಶಾರ್ದೂಲವಿಕ್ರೀಡಿತವೃತ್ತವನ್ನು ಆಶುವಾಗಿ ಹೇಳಿದ. "ಎರಡು ಸೊನ್ನೆಗಳು ಕೊನೆಯಲ್ಲಿರುವ ಪದ ಕರ್ತೃವೆಂದೂ, ಒಂದು ಸೊನ್ನೆ ಮೇಲಿರುವ ಪದ ಕರ್ಮವೆಂದೂ ಯಾರು ಪಾಠ ಕಲಿತಿರುವರೋ ಅವರಿಗೆ ದೊಡ್ಡ ನಮಸ್ಕಾರ! ಯಾರು ಸಾವಿರಾರು ಗ್ರಂಥಗಳ ಒರೆಗಲ್ಲಿಗೆ ತಿಕ್ಕಿ ತಮ್ಮ ನುಡಿಗಳ ಕಲ್ಮಶವನ್ನು ಕಳೆದುಕೊಂಡು ಉಲ್ಲಾಸದಿಂದ ಕವನಿಸಬಲ್ಲರೋ ಅಂಥವರನ್ನೇ ಬಿಲ್ಹಣನು ಎದುರಾಳಿಗಳನ್ನಾಗಿ ಸ್ವೀಕರಿಸುತ್ತಾನೆ" ಇಲ್ಲಿ ದೇವನಾಗರೀಲಿಪಿಯಲ್ಲಿ ಬರೆದ ಸಂಸ್ಕೃತ ಭಾಷೆಯಲ್ಲಿ ವಿಸರ್ಗವು ':' ಎಂದೂ, ಅನುಸ್ವಾರವು 'ಂ' ಎಂದೂ ಸೂಚಿತವಾಗುವುದನ್ನಾಧರಿಸಿ ಕುರುಡು ಪಾಠದಿಂದ ಹೀಗೆ ಪ್ರಥಮಾ ವಿಭಕ್ತಿಯೆಲ್ಲ ಕರ್ತೃ, ದ್ವಿತೀಯಾ ವಿಭಕ್ತಿಯೆಲ್ಲ ಕರ್ಮ ಎಂದು ವಿವಕ್ಷೆಯಿಲ್ಲದೆ ಊಹಿಸುವ ವ್ಯಾಕರಣವಿದ್ಯಾಹೀನರ ವಿಡಂಬನೆ ಉಂಟು.

—೧೮—

ಯದ್ವಕ್ರೇಣ ಪಥಾ ಪ್ರಯಾಸಿ ಸತತಂ ಯದ್ಭಾಸಿ ವಿದ್ವನ್ಮನ
ಶ್ಚೌರೀ ಯಚ್ಚ ಕರೋಷಿ ಪೂರ್ವಸುಕವಿಪ್ರೌಢಿಪ್ರಥೋತ್ಪುಂಸನಂ ।
ತಸ್ಮಾದ್ಭಾರತಿ ! ಸದ್ಭಿರತ್ರ ಭವತೀ ತೀಕ್ಷ್ಣೇತಿ ಸಂಭಾವಿತಾ
ತೂರ್ಣಂ ಪಾರ್ಶ್ವಮಮುಷ್ಯ ಪಾರ್ಥಿವಮುನೇರಭ್ಯೇಹಿ ಶುದ್ಧ್ಯರ್ಥಿನೀ ॥

ಕಾಶ್ಮೀರವು ಬಹುಕಾಲದಿಂದಲೂ ಸರಸ್ವತೀವಿಭ್ರಮಜನ್ಮಭೂಮಿಯೆಂದು ಹೆಸರಾಗಿತ್ತು. ಇಲ್ಲಿಯ ಪ್ರವರಪುರ(ಶ್ರೀನಗರ)ದಲ್ಲಿದ್ದ ಕವಿ–ಪಂಡಿತರ ಸಂಖ್ಯೆ ಅಪಾರ. ಅವರ ವಿದ್ಯಾವೈದುಷ್ಯವೂ ಅಮೋಘ.

ಕ್ರಿ.ಶ. ಹನ್ನೆರಡನೆಯ ಶತಾಬ್ದದಲ್ಲಿದ್ದ ಮಂಖ ಮಹಾಕವಿ ಕಾಶ್ಮೀರದವನೇ. ಸುಪ್ರಸಿದ್ಧ ಆಲಂಕಾರಿಕ ರುಯ್ಯಕ ಇವನ ಗುರು. ನರಸ್ತುತಿಯನ್ನು ಮಾಡಲಾರೆನೆಂದು ತೀರ್ಮಾನಿಸಿ ವಿಸ್ತಾರವಾಗಿ ಶಿವನ ಮಹಿಮೆಯನ್ನು ಶ್ರೀಕಂಠಚರಿತವೆಂಬ ಮಹಾಕಾವ್ಯದ ಮೂಲಕ ಮಾಡಿ ಶಾಶ್ವತಕೀರ್ತಿ ಪಡೆದಿದ್ದಾನೆ. ಈತ ತನ್ನ ಮಹಾಕಾವ್ಯವನ್ನು ರಚಿಸಿ ಆ ಬಳಿಕ ತನ್ನ ಗುರುವಿನ ಸನ್ನಿಧಿಗೆ ತೆಗೆದುಕೊಂಡು ಹೋದಾಗ ಅಲ್ಲಿ ಬಹುದೊಡ್ಡ ವಿದ್ವದ್ರಸಿಕರ ಪರಿಷತ್ತೇ ಸೇರಿತ್ತು. ಇವರೆಲ್ಲರಿಗೂ ಮಂಖನ ಅಣ್ಣ ಲಂಕಕನ ಮನೆಯ ಪಡಸಾಲೆ ಸ್ಥಳ ಕೊಟ್ಟಿತ್ತು. ನಂದನ, ರಮ್ಯದೇವ, ಪ್ರಭಾಕರ, ಶ್ರೀಗರ್ಭ, ಮಂಡನ, ಗರ್ಗ, ಶ್ರೀಕಂಠ, ಶ್ರೀದೇವಧರ, ಜಯಸಿಂಹ, ಅಲಂಕಾರ, ನಾಗ, ತ್ರೈಲೋಕ್ಯ, ದಾಮೋದರ, ಗೋವಿಂದ, ಕಲ್ಯಾಣ (ಈತನೇ ಮಹಾಕವೀತಿಹಾಸಕಾರ ಕಲ್ಹಣ), ಅಲಕದತ್ತ, ಪದ್ಮರಾಜ, ಜನಕರಾಜ, ಆನಂದ, ಲಕ್ಷ್ಮೀದೇವ, ಸುಹಲ, ಜೋಗರಾಜ ಮೊದಲಾದ ಅನೇಕ ಕವಿ-ವಿದ್ವಾಂಸರ, ಗಣ್ಯರ ಸಮಕ್ಷದಲ್ಲಿ ತನ್ನ ಕಾವ್ಯವನ್ನೋದಿ ಮೆಚ್ಚನ್ನು ಪಡೆದಾಗ ಅಲ್ಲಿಗೆ ಆಗಮಿಸಿದ್ದ ಕೊಂಕಣದೇಶದ ರಾಜ ಅಪರಾದಿತ್ಯನ ರಾಯಭಾರಿ ತೇಜಃಕಂಠನು ಮಂಖನನ್ನು "ನೀನು ನರಸ್ತುತಿ ಮಾಡದವ, ರಾಜಪಾಟುಗಳನ್ನು ರಚಿಸದ ಶುದ್ಧಾತ್ಮ. ಆದರೂ ನನಗೆ, ನನ್ನಂಥ ರಾಜೋದ್ಯೋಗಿಗಳಿಗೆ, ಉಪಯೋಗಕ್ಕೆ ಬರುವ ನಾಲ್ಕೈದು ಪದ್ಯಗಳನ್ನು ಕೃಪೆಯಿಂದ ಅನುಗ್ರಹಿಸು" ಎಂದು ಬೇಡಿದಾಗ ಕವಿಯು ದಾಕ್ಷಿಣ್ಯ ಸೌಜನ್ಯಗಳಿಗೊಳಗಾಗಿ ನರಸ್ತುತಿಯಾಗಿ, ಆದರೆ ಯಾವ

ರಾಜನೇಬ ನಿರ್ದೇಶವಿಲ್ಲದೆ ಅಮೂರ್ತವಾದ ಪದ್ಯಗಳನ್ನು ರಚಿಸಿದ. ಅದ
ಲ್ಲೊಂದು ಮೇಲಣ ವೃತ್ತ. ಇದು ವಕ್ರೋಕ್ತಿಗೆ ಅತ್ಯುತ್ತಮ ನಿದರ್ಶನ.

"ಸರಸ್ವತಿ! ನಿನ್ನದು ಡೊಂಕುದಾರಿ. ವಿದ್ವಾಂಸರ ಮನಸ್ಸನ್ನು ಕದ್ದಿರುವಿ.
ಹಿಂದಿನ ಸುಕವಿಗಳ ಹೆಸರನ್ನು ಒರೆಸಿಹಾಕಿರುವಿ! ಆದುದರಿಂದ ಇಲ್ಲಿಯ
ಸಜ್ಜನರು ನಿನ್ನನ್ನು ಅಪರಾಧಿನಿಯೆಂದು ತೀರ್ಮಾನಿಸಿದ್ದಾರೆ. ಬೇಗ ಈ
ರಾಜರ್ಷಿಯ ಬಳಿ ಬಂದು ತಕ್ಕ ದಂಡನೆ ಪಡೆದು ಶುದ್ಧಳಾಗು!!" ಇತ್ಯ
ರಾಜನ ಮಹತ್ತ್ವ ಕವಿಯ ವಾಕ್ಪ್ರೌಢಿಯ ವ್ಯಂಗ್ಯಮಾರ್ಗದಿಂದ ರಂಜಿಸಿದೆ.

—೧೯—

ಏತದ್ಭ್ರುಕುಟಾನುಕಾರಿಕಿರಣಂ ರಾಜದ್ರುಹೋಽಹ್ನಃ ಶಿರ-
ಶ್ಛೇದಾಭಂ ವಿಯತಃ ಪ್ರತೀಚಿನಿ ಪತತ್ಯಬ್ಧೌ ರವೇರ್ಮಂಡಲಂ ।
ಏಷಾಪಿ ದ್ಯುರಮಾ ಪ್ರಿಯಾನುಗಮನಂ ಪ್ರೋದ್ದಾಮಕಾಮೋತ್ಥಿತೇ
ಸಂಧ್ಯಾಗ್ನೌ ವಿರಚಯ್ಯ ತಾರಕಮಿಷಾಜ್ಜಾತಾಸ್ಥಿಶೇಷಸ್ಥಿತಿಃ ॥

ಕಾಶ್ಮೀರದ ಮಹಾಕವಿ ಮಂಖನು (ಈತನನ್ನು ಮಂಖಕ ಎಂದೂ ಕರ
ಯುತ್ತಾರೆ) ತನ್ನ ಶ್ರೀಕಂಠಚರಿತ ಮಹಾಕಾವ್ಯವನ್ನು ವಿದ್ವತ್ಪರಿಷತ್ತಿನೆದುರು
ಶ್ರುತಪಡಿಸಿದ ಬಳಿಕ ಆತನ ಗೃಹಕವಿತ್ವ (ಮನೆಯಲ್ಲಿ ವಿರಾಮವಾಗಿ ಆಲೋ
ಚಿಸಿ ರಚಿಸಿದ ಕವಿತ್ವ)ವನ್ನು ಮೆಚ್ಚಿದ ಸಭ್ಯರು ಸಭಾಕವಿತ್ವ (ಸಭೆಯಲ್ಲಿ
ಆಶುರೀತಿಯಿಂದ ಕೂಡಲೇ ಹೇಳುವ ಕವಿತ್ವ) ಹೇಗಿರುವುದೋ ತಿಳಿಯ
ಬೇಕೆಂದು ಬಯಸಿದಾಗ ಕಾನ್ಯಕುಬ್ಜದ ರಾಜ ಗೋವಿಂದಚಂದ್ರನ ರಾಯ
ಭಾರಿಯೂ, ಮಹಾವ್ಯಾಕರಣವಿದ್ವಾಂಸನೂ ಆದ ಸುಹಲನು ಮೇಲಣ
ಪದ್ಯದ ಮೊದಲಿನ ಎರಡು ಸಾಲುಗಳನ್ನು ಸಮಸ್ಯೆಯ ರೂಪದಲ್ಲಿ ಕೊಟ್ಟನು.

"ರಾಜದ್ರೋಹಿಯ ಶಿರಸ್ಸು ತುಂಡರಿಸಲ್ಪಟ್ಟು ಪಶ್ಚಿಮದಿಕ್ಕಿಗೆ ಬಿದ್ದಂತೆ ಪಿಂಗಲಕಿರಣಗಳೆಂಬ ಕೂದಲಿನೊಡನೆ ಕೆಂಬಣ್ಣದ ರವಿಮಂಡಲವು ಕಾಣುತ್ತಿದೆ." (ರಾಜ ಎಂದರೆ ಚಂದ್ರನೆಂಗೂ ಅರ್ಥವುಂಟು).

ಕೂಡಲೇ ಮಂಖನು ಉತ್ತರಾರ್ಧವನ್ನು ಎರಡು ಸಾಲುಗಳಲ್ಲಿ ಅದೇ ಶೈಲಿಯನ್ನನುಸರಿಸಿ ಹೇಳಿದನು.

"ಈ ದಿನನಾರಿಯೂ ತನ್ನ ಪತಿಯನ್ನು ಸಹಗಮನದ ಮೂಲಕ ಸೇರಲು ಸಂಧ್ಯಾರಾಗವೆಂಬ ಚಿತೆಗೇರಿದಳು. ಅವಳು ಸುಟ್ಟು, ಈಗ ಉಳಿದ ಅಸ್ಥಿಸಂಚಯವೆಂಬಂತೆ ನಕ್ಷತ್ರರಾಜಿ ಉಳಿದಿದೆ"

(ಕಾಷ್ಠ ಎಂದರೆ ಕಟ್ಟಿಗೆ ಎಂದೂ, ದಿಕ್ಕೆಂದೂ ಅರ್ಥವಿರುವುದರಿಂದ ದಿಕ್ಕುಗಳಲ್ಲಿ ಕಾಣಿಸಿದ ಸಂಧ್ಯಾರಾಗ ಹಾಗೂ ಕಟ್ಟಿಗೆಯಿಂದೆದ್ದ ಹೊಂಬಣ್ಣದ ಬೆಂಕಿ ಎಂಬ ಅರ್ಥಗಳು ಸ್ಫುರಿಸುತ್ತವೆ.)

ಪ್ರಕೃತಿವ್ಯಾಪಾರವೊಂದನ್ನು ಇಷ್ಟು ವಿಲಕ್ಷಣರಮಣೀಯತೆಯಿಂದ ವರ್ಣಿಸುವಾಗ ಇಬ್ಬರು ಕವಿಗಳ ಕೈವಾಡ ಎಳ್ಳಷ್ಟೂ ಕಾಣಿಸದಂತೆ, ಒಂದೇ ಧಾರೆಯೆಂಬಂತೆ ಅಪೂರ್ವಕಲ್ಪಕಶಕ್ತಿಯಿಂದ ಆಶುವಾಗಿ ಈ ಪದ್ಯದಲ್ಲಿ ನಿರ್ವಹಿಸಿರುವ ಮಂಖನ ಪ್ರತಿಭಾ-ಪಾಂಡಿತ್ಯಗಳು ಅದ್ಭುತ.

—೨೦—

ಸ್ಮರಗರಲಖಂಡನಂ ಮಮ ಶಿರಸಿ ಮಂಡನಂ<br>
ದೇಹಿ ಪದಪಲ್ಲವಮುದಾರಂ ।<br>
ಜ್ವಲತಿ ಮಯಿ ದಾರುಣೋ ಮದನಕದನಾರುಣೋ<br>
ಹರತು ತದುಪಾಹಿತವಿಕಾರಂ ॥

ಸಂಸ್ಕೃತ ಸಾಹಿತ್ಯದಲ್ಲಿ ಅಜರಾಮರ ತಾರೆ ಭಕ್ತಕವಿ ಜಯದೇವ. ಈತನ ಕವಿತಾಮಾಧುರ್ಯ ವಿಸ್ಮಯಾವಹ. ಏಕೈಕ ಕೃತಿಯಿಂದ ಆಚಂದ್ರಾರ್ಕಕೀರ್ತಿ

ಪಡೆದ ಕವೀಶ್ವರರಲ್ಲಿ ಈತ ಅಗ್ರಗಣ್ಯ. ಇವನ 'ಗೀತಗೋವಿಂದ'ವು ಜಗತ್ತಿನ ಯಾವುದೇ ಭಾಷೆಗೂ ಇಲ್ಲದ ಇಂಪು-ಸೊಂಪುಗಳನ್ನು ಸಂಸ್ಕೃತಕ್ಕೆ ತಂದು ಕೊಟ್ಟು ತನ್ನ ನೂರಾರು ಅನುಕರಣಗಳಿಗೂ ಸಿಗದೆ ಮಿಂಚಿ ಮೆರೆದಿದೆ. ವಂಗ ದೇಶದ ಕಿಂದುಬಿಲ್ವದಲ್ಲಿ ಹುಟ್ಟಿದ ಜಯದೇವ ಹನ್ನೆರಡನೆಯ ಶತಾಬ್ದದಲ್ಲಿ ಲಕ್ಷ್ಮಣಸೇನನ ಆಸ್ಥಾನಕವಿಯಾಗಿದ್ದ.

ರಾಧಾಕೃಷ್ಣರ ಮಧುರಶೃಂಗಾರ ಪರಾಕಾಷ್ಠೆಯನ್ನು ವಿವರಿಸುವಾಗ ಕವಿಯು (ಗೀತಗೋವಿಂದದ 10ನೇ ಸರ್ಗದ, 19ನೆಯ ಅಷ್ಟಪದಿಯಲ್ಲಿ) ಶ್ರೀಕೃಷ್ಣನು ರಾಧೆಯನ್ನು "ಮನ್ಮಥ ಬಾಧೆಯೆಂಬ ವಿಷವನ್ನು ಇಳಿಸುವ, ಮದನ ತಾಪವನ್ನು ಶಮನಿಸುವ ನಿನ್ನ ಪಾದಪಲ್ಲವಗಳನ್ನು ನನ್ನ ತಲೆಗೆ ಅಲಂಕಾರ ವೆಂಬಂತೆ ಇರಿಸು" ಎಂದು ಬೇಡುವಂತೆ ಕವನಿಸಿಬಿಟ್ಟ. ಆ ಬಳಿಕ ಇಂಥ ಉದ್ಧತವೃತ್ತಿ ಭಗವದಪಚಾರವೆಂದು ಬಗೆದು ಈ ಬರವಣಿಗೆಯನ್ನು ಅಳಿಸಿ ಬಿಟ್ಟನಂತೆ. ಆದರೆ ಮರುದಿನ ಅದು ಹಾಗೆಯೇ ಅಚ್ಚಳಿಯದಂತಿತ್ತು. ಮತ್ತೆ ಅಳಿಸಿದ, ಪುನಃ ಅದೇ ಕಥೆ! ಆ ಭೂರ್ಜಪತ್ರವನ್ನೇ ಸುಟ್ಟುಬಿಟ್ಟು ಹೊರಗೆ ಹೋದಾಗ ಶ್ರೀಕೃಷ್ಣನು ಕವಿಯ ರೂಪದಲ್ಲಿ ಬಂದು ಮೇಲಣ ಪದ್ಯವನ್ನೇ ಬರೆದು ತೋರಿದನಂತೆ. ಜಯದೇವ ಹಿಂದಿರುಗಿಬಂದು ಆದದ್ದನ್ನೆಲ್ಲ ಅರಿತು ಆ ಬಳಿಕ ಇದು ಈಶ್ವರನ ಸಂಕಲ್ಪವೆಂದು ಅರಿತು ಆ ಪಾಠವನ್ನೇ ಇರಿಸಿ ಮುಂದುವರೆದನಂತೆ. ಒಟ್ಟನಲ್ಲಿ ಮಧುರಭಕ್ತಿ ಪ್ರಕಾರದ ಪಾರಮ್ಯವನ್ನು ಪ್ರತಿಪಾದಿಸುವ ಈ ವೃತ್ತಾಂತ ರಮಣೀಯ. ಮುಂದೊಂದು ಪ್ರಸಂಗದಲ್ಲಿ ಪತಿಯ ಮರಣವಾರ್ತೆಯನ್ನು ಆಲಿಸಿದ ಪದ್ಮಾವತಿ ಅದು ಸುಳ್ಳೆಂದು ತಿಳಿಯದ ಕೂಡಲೇ ಗತಿಸಿದಾಗ ಧಾವಿಸಿಬಂದ ಜಯದೇವನು ಹೆಂಡತಿಯನ್ನು ಬದುಕಿಸಲು ಇದೇ ಅಷ್ಟಪದಿಯನ್ನು ಹಾಡಿದನೆಂದೂ, ಇದನ್ನು ಅಮೃತಾಷ್ಟಪದಿ ಪ್ರಾಣಾಷ್ಟಪದಿಯೆಂದು ಕರೆಯುವರೆಂದೂ ಪ್ರತೀತಿ ಉಂಟು.

—೨೧—

ಕಿಮುಸ್ಥಿಮಾಲಾಂ ಕಿಮು ಕೌಸ್ತುಭಂ ವಾ
ಪರಿಷ್ಕ್ರಿಯಾಯಾಂ ಬಹುಮನ್ಯಸೇ ತ್ವಂ ।
ಕಿಂ ಕಾಲಕೂಟಃ ಕಿಮು ವಾ ಯಶೋದಾ–
ಸ್ತನ್ಯಂ ತವ ಸ್ವಾದು ವದ ಪ್ರಭೋ ಮೇ ॥

ಆಂಧ್ರಕವಿಗಳಲ್ಲಿ ಅಗ್ರೇಸರನಾದವನು ಕವಿಬ್ರಹ್ಮ ತಿಕ್ಕನಸೋಮಯಾಜಿ. ಪಂಪ-ನಾರಣಪ್ಪರಿಬ್ಬರ ಗುಣಗಳೂ ಕಲೆತಂಥ ರಚನೆ ಆತನದು. ತೆಲುಗು ಮಹಾಭಾರತದ ಹದಿನೈದು ಪರ್ವಗಳು ಈತನ ಬರಹವೇ. ತೆಲುಗುತನವನ್ನು ಎಣೆಯಿಲ್ಲದೆ ತೋರಿಸಿದವನಾದರೂ ಸಂಸ್ಕೃತದಲ್ಲಿ ಉದ್ದಾಮವಿದ್ವಾಂಸ.

ಈತನ ಕಾಲದಲ್ಲಿ (ಕ್ರಿ. ಶ. 13ನೆಯ ಶತಾಬ್ದ) ಶೈವ-ವೈಷ್ಣವ ಮತ ವೈಷಮ್ಯದಿಂದ ಜನತೆ ಅಂತಃಕಲಹದಲ್ಲಿ ತೊಡಗಿತ್ತು. ಆಗ ಧರ್ಮಾದ್ವೈತವನ್ನು ಬೋಧಿಸಲು ತಿಕ್ಕನನು ವ್ಯಾಸಭಾರತವನ್ನು ಹರಿಹರನಾಥನಿಗೆ ಅರ್ಪಿಸಲು ಆಂಧ್ರೀಕರಣಕ್ಕೆ ತೊಡಗಿದನು. ಈ ನಿಶ್ಚಯಕ್ಕೆ ಬರುವ ಮುನ್ನ ಸಾಮಾಜಿಕ-ಧಾರ್ಮಿಕ-ರಾಜಕೀಯ ಉಪಪ್ಲವಗಳಿಂದ ನೊಂದು ಅಂತರ್ಮಥನದಲ್ಲಿದ್ದಾಗ ಒಮ್ಮೆ ರಾತ್ರಿಯಲ್ಲಿ ಕನಸು ಮೂಡಿತು. ಸ್ವಪ್ನದಲ್ಲಿ ತಿಕ್ಕನನ ತಂದೆಯೂ, ಹರಿಹರನಾಥ ಸ್ವಾಮಿಯೂ ಕಾಣಿಸಿಕೊಂಡು ಜನತೆಯಲ್ಲಿ ಸಹನೆ, ಸಾಮರಸ್ಯ, ಸ್ನೇಹಗಳನ್ನು ತರಲು ಮಹಾಭಾರತವನ್ನು ತೆಲುಗಿಸಬೇಕೆಂದು ಆಣತಿ ಕೊಡಲು ಅದಕ್ಕೆ ಅಂಗೀಕೃತಿಸೂಚಕವಾಗಿ ತಿಕ್ಕನನು ಪೂರ್ವದಲ್ಲಿ ತಾನು ರಚಿಸಿದ್ದ ಈ ಸ್ತವವನ್ನು ಪುನರುಚ್ಚರಿಸಿ ಬಳಿಕ ವಾಚಿಕವಾಗಿ ಒಪ್ಪಿ ಮುಂದುವರೆದನೆಂದು ಆತನೇ ತನ್ನ ವಿರಾಟಪರ್ವದ ಅವತಾರಿಕೆಯಲ್ಲಿ ಹೇಳಿಕೊಂಡ ಸಂಗತಿ. ಮೇಲಿನ ಪದ್ಯದ ಭಾವ ಅತ್ಯುದಾತ್ತವಾದದ್ದು. ಹರಿಹರಾತ್ಮಕವಾದ ಆ ಅದ್ವಯಮೂರ್ತಿಯನ್ನು ಕವಿ ಹೀಗೆ ಪ್ರಶ್ನಿಸುತ್ತಾನೆ ;

"ಸ್ವಾಮಿ ! ನಿನಗೆ ಅಲಂಕಾರಕ್ಕಾಗಿ ತಲೆಬುರುಡೆಗಳ ಹಾರ ಇಷ್ಟವೇ ? ಕೌಸ್ತುಭಮಣಿ ಪ್ರಿಯವೇ ? ಅಥವಾ ಕುಡಿಯಲು ಹಾಲಾಹಲವು ಪ್ರಿಯವೇ ? ಯಶೋದೆಯ ಎದೆ ಹಾಲು ಇನಿದೇ ? ಹೇಳು ನನಗೆ ! !"

ಈ ಉದಾರ ಸಹಿಷ್ಣುತಾಮಾರ್ಗ ಪ್ರಾಚ್ಯ ಭಾರತದ ಮಹಾಕವಿಗಳ, ದಾರ್ಶನಿಕರ ಜೀವನ ಶ್ವಾಸವಾಗಿತ್ತು.

—೨೨—

ನವಲಕ್ಷಧನುರ್ಧರಾಧಿನಾಥೇ ಪೃಥಿವೀಂ ಶಾಸತಿ ವೀರರುದ್ರಭೂಪೇ।
ಅಭವತ್ಪರಮಾಗ್ರಹಾರಪೀಡಾ ಕುಚಕುಂಭೇಷು ಕುರಂಗಲೋಚನಾನಾಂ॥

ಹದಿಮೂರನೆಯ ಶತಮಾನಾಂತ್ಯದಲ್ಲಿದ್ದ ವಿದ್ಯಾನಾಥನು ವಿದ್ವತ್ಕವಿ, ಅಲಂಕಾರಿಕ. ಈತನ ಪ್ರತಾಪರುದ್ರಯಶೋಭೂಷಣವೆಂಬ ಅಲಂಕಾರ ಶಾಸ್ತ್ರದ ಪಾಠ್ಯಗ್ರಂಥವು ಈವರೆವರೆಗೂ ಪಂಡಿತರಿಗೆ ಜನಪ್ರಿಯವಾದ ಕೈಪಿಡಿಯಾಗಿತು. ಧ್ವನಿತತ್ತ್ವವನ್ನಾಧರಿಸಿ ಅಲಂಕಾರಶಾಸ್ತ್ರದ ಎಲ್ಲ ವಿಚಾರಗಳನ್ನೂ, ನಾಟಕಸಂಬಂಧಿನಿಯಮಗಳನ್ನೂ ಲಕ್ಷ್ಯ-ಲಕ್ಷಣ ಸಮನ್ವಯ ಮಾಡಿದ ಈ ಕೃತಿ ಸ್ವೋಪಜ್ಞವಲ್ಲದಿದ್ದರೂ ಉಪಕಾರಿ. ಇದರ ವಿಶೇಷವೇನೆಂದರೆ ಮೊದಲ ಬಾರಿಗೆ ಇಂಥ ಗ್ರಂಥದಲ್ಲಿ ಎಲ್ಲ ಲಕ್ಷ್ಯಕವಿತೆ ಹಾಗೂ ನಾಟಕವು ಕೃತಿಪತಿಯೂ, ಕವಿಯ ಆಶ್ರಯದಾತನೂ ಆದ ಪ್ರತಾಪ ರುದ್ರನನ್ನೇ ಕುರಿತಿದೆ !

ಬಡತನದಲ್ಲಿ ಬೆಂದು, ಅನಾಥನಾಗಿ, ದಾಯಾದರಿಂದ ನೊಂದು, ಸ್ವಂತ ಶ್ರಮದಿಂದ ಪಂಡಿತನಾಗಿ ಅಹನ್ಯಹನಿ ಕಷ್ಟಪಟ್ಟು ಕಡೆಗೆ ಮಗಳ ಮದುವೆಗಾಗಿ ರಾಜನನ್ನು ಯಾಚಿಸಲು ಅತಿ ಪ್ರಯತ್ನದಿಂದ ಮನಸ್ಸನ್ನೊಗ್ಗಿಸಿ ವಿದ್ಯಾನಾಥನು ಓರುಗಲ್ಲಿನಲ್ಲಿದ್ದ ಕಾಕತೀಯರಾಜ ಪ್ರತಾಪರುದ್ರದೇವನ ಆಸ್ಥಾನಕ್ಕೆ ಹೋದ. ಅಲ್ಲಿ ಅದೇ ವೇಳೆಗೆ ವಿಲೇಶ್ವರವೆಂಬ ಅಗ್ರಹಾರದ ಅಗ್ರಣಿ ಶಿವಯ್ಯನೆಂಬಾತ ತಮ್ಮ ಅಗ್ರಹಾರದ ದುಸ್ಸ್ಥಿತಿಯನ್ನು ಮೇಲಣ ಪದ್ಯದ ಮೂರು ಪಾದಗಳಲ್ಲಿ ಹೇಳಿಕೊಂಡ ; ಅದರಲ್ಲಿ ರಾಜನ ಭತ್ಸ್ರನೆ ಇತ್ತು.

"ಒಂಬತ್ತುಲಕ್ಷ ಬಿಲ್ಗಾರರ ಸೈನ್ಯ ಹೊಂದಿದ ಪ್ರತಾಪರುದ್ರನು ಧರೆಯನ್ನಾಳುತ್ತಿರಲಾಗಿ ಪರಮಾಗ್ರಹಾರಗಳಿಗೆ (ಒಳ್ಳೆಯ ಅಗ್ರಹಾರಗಳಿಗೆ) ಪೀಡೆಯಾಗುತ್ತಿದೆ..."

ಕೂಡಲೇ ಪ್ರತ್ಯುತ್ಪನ್ನ ಮತಿಯಾದ ವಿದ್ಯಾಧರ ಅಂತಿಮ ಪಾದವನ್ನು ಹೇಳಿಬಿಟ್ಟ.

"...ಎಲ್ಲೆಂದರೆ—ಅದು ಕೇವಲ ಜಿಂಕೆಗಣ್ಣಿನ ಬಾಲೆಯರ ಕುಚ ಕುಂಭಗಳಲ್ಲಿ ಮಾತ್ರ !"

('ಪರಮ+ಅಗ್ರಹಾರ' ಎಂಬುದಕ್ಕೆ ಬದಲಾಗಿ 'ಪರಮ+ಅಗ್ರ+ಹಾರ' ಎಂದು ಪದ ವಿಭಾಗ ಮಾಡಿದರೆ ಶ್ಲೇಷಚ್ಛಾಯೆಯಿಂದ ಈ ಪದ್ಯವು ಪರಿಸಂಖ್ಯಾಲಂಕಾರವನ್ನು ಹೊಂದಿ—ಪ್ರತಾಪರುದ್ರನು ಧರೆಯನ್ನಾಳುತ್ತಿರಲು ಒಳ್ಳೆಯ ಅಗ್ರಹಾರದ ಪೀಡೆಯು [ಕೊರಳ ಸರದ ಪದಕಕ್ಕೆ ಹಿಂಸೆಯು] ಸ್ತ್ರೀಯರ ತುಂಬಿದೆದೆಗಳಲ್ಲಿ [ಇಕ್ಕಟ್ಟಿನಲ್ಲಿ ಸಿಕ್ಕ ಕಾರಣ] ಆಗುತ್ತಿತ್ತು; ಅಷ್ಟೇ ಹೊರತು ಅನ್ಯಥಾ ಅಲ್ಲ—ಎಂಬ ಚಮತ್ಕಾರ ಬರುತ್ತದೆ.) ಇದನ್ನಾಲಿಸಿ ಹರ್ಷಿಸಿದ ರಾಜ ವಿದ್ಯಾಧರನಿಗೆ ಘನ ಸಂಮಾನ ಮಾಡಿದ. ಅಗ್ರಹಾರಿಕರಿಗೂ ಕ್ಲೇಶ ಕಳೆಯಿತು.

—೨೪—

ಕಿಂ ವಾಸಸಾ ಟೀಕಿರಿ-ಬಾಕಿರೇಣ ಕಿಂ ದಾರುಣಾ ಪಂಕರ ಟಂಕರೇಣ ।
ಸರ್ವಜ್ಞಭೂಪಾಲವಿಲೋಕನಾರ್ಥಂ ವೈದುಷ್ಯಮೇಕಂ ವಿದುಷಾಂಸಹಾಯ್ಯಂ ॥

ವ್ಯಾಖ್ಯಾನಚಕ್ರವರ್ತಿಯೆಂದು ಆಸೇತುಶೀತಾಚಲ ಖ್ಯಾತಿ ಪಡೆದ ಮಹಾಮಹೋಪಾಧ್ಯಾಯ ಕೋಲಾಚಲ ಮಲ್ಲಿನಾಥನು ಪ್ರಕಾಂಡ ಪಂಡಿತ, ಪ್ರೌಢಕವಿ. ತನ್ನ ತಾತ ಶತಾವಧಾನಿ ಮಲ್ಲಿನಾಥ ಸೂರಿಯಂತೆಯೇ ಆಶುಪದ್ಯ ರಚನಾಧುರೀಣ. ಪಂಚಮಹಾಕಾವ್ಯಗಳಿಗೆ ಅಪ್ರತಿಹತ ಟೀಕೆಗಳನ್ನು ನಿರ್ಮಿಸಿದ್ದಲ್ಲದೆ ವ್ಯಾಕರಣಕಾವ್ಯವಾದ ರಾವಣವಧ, ಅಲಂಕಾರ

ಶಾಸ್ತ್ರಕೃತಿ ಏಕಾವಳಿ, ವೈಶೇಷಿಕಭಾಷ್ಯ, ತಂತ್ರವಾರ್ತಿಕ, ಕಾವ್ಯಾದರ್ಶ ಮೊದಲಾದ ನಾನಾ ಗ್ರಂಥಗಳಿಗೂ ವ್ಯಾಖ್ಯಾನಗಳನ್ನು ಬರೆದು ರಘುವೀರ ಚರಿತ, ಉದಾರಕಾವ್ಯಾದಿ ಸಾಹಿತ್ಯ ಕೃತಿಗಳನ್ನೂ ರಚಿಸಿದ ಸಾರಸ್ವತ ಚತುರಾನನ ಮಲ್ಲಿನಾಥ.

ಆಂಧ್ರದೇಶೀಯನಾದ ಕಾಶ್ಯಪಗೋತ್ರ ಆಪಸ್ತಂಬಸೂತ್ರ ಕೃಷ್ಣ ಯಜುರ್ವೇದಕ್ಕೆ ಸೇರಿದ ಈ ವಿದ್ವಾಂಸ ಕ್ರಿ. ಶ. 1340-1350ರ ನಡುವೆ ಜನಿಸಿದವನು. ಇವನು ಬಾಲ್ಯದಲ್ಲಿ ದಡ್ಡನಾಗಿದ್ದು ಆ ಬಳಿಕ ಅಲೌಕಿಕ ಘಟನೆಗಳಿಂದಾಗಿ ಮೇಧಾವಿಯಾದನೆಂದೂ ಕಥೆಗಳಿವೆ. ಈತನ ಸರಳತೆಯೂ ಸುಪ್ರಸಿದ್ಧ. ಒಮ್ಮೆ ಮಲ್ಲಿನಾಥನು ರಾಚಕೊಂಡ ಸಂಸ್ಥಾನಾಧಿಪತಿಯೂ, ವಿದ್ವತ್ಪ್ರೋತ್ಸಾಹಕನೂ ಆದ ಸರ್ವಜ್ಞ ಸಿಂಗಭೂಪಾಲನ ಆಸ್ಥಾನಕ್ಕೆ ಹೊರಟಿದ್ದ. ತೀರ ಸಾಮಾನ್ಯವಾದ; ಕೊಂಚಮಟ್ಟಿಗೆ ಹರಿದಿದ್ದ ಬಟ್ಟೆ (ಬ್ರಾಹ್ಮಣನು ಹೊಲಿದ ಬಟ್ಟೆಯುಡಬಾರದೆಂದು ಶಾಸ್ತ್ರವಿರುವುದರಿಂದ ಅಸ್ಯೂತ ವಸ್ತ್ರ) ಧರಿಸಿ, ಕೈಗೊಂದು ಅಂಕುಡೊಂಕಾದ ಊರೆಗೋಲು ಹಿಡಿದು ನಡೆದಿದ್ದ ಈತನ ಅವತಾರವನ್ನು ಕಂಡು ಯಾರೋ ಬೆರಗಾಗಿ 'ಇದೇನೀ ವೇಷದಲ್ಲಿ ಪ್ರಭು ದರ್ಶನವೇ ?' ಎಂದು ಕೇಳಿದಾಗ ಒಡನೆಯೇ ಮೇಲಣ ಇಂದ್ರವಜ್ರಾ ವೃತ್ತವನ್ನು ಆಶುವಾಗಿ ಹೇಳಿದ.

"ಹರುಕಲು ತರುಕಲು ಬಟ್ಟೆಯಿದ್ದರೇನು ? ಅಂಕು ಡೊಂಕಿನ ದೊಣ್ಣೆ ಇದ್ದರೇನು ? ಸರ್ವಜ್ಞಸಿಂಗ ಭೂಪಾಲನನ್ನು ಕಾಣಲು ವಿದ್ವಾಂಸರಿಗೆ ಅವರ ಪಾಂಡಿತ್ಯವೊಂದೇ ಅವಲಂಬನ !"

---

ಟಿಪ್ಪಣಿ :— ಮೂಲ ಪದ್ಯದಲ್ಲಿ 'ಚೀರಿ-ಚಾರಿ' (ಹರುಕಲು-ತರುಕಲು) 'ಮೊಂ-ಡೊಂಡಿ' (ಅಂಕು-ಡೊಂಕು) ಎಂಬ ತೆಲುಗು ಪದಗಳು ಮಲ್ಲಿನಾಥನ [illegible], ದಾರಿದ್ರ್ಯಾವಸ್ಥೆಯನ್ನು ಸೂಚಿಸುವುದಲ್ಲದೆ [illegible]

—೨೪—

ತಿಂತ್ರಿಣೀದಲಸಮಾನಲೋಚನೇ ದೇವದುಂದುಭಿಸಮಾನಮಧ್ಯಮೇ ।
ಅರ್ಕಶುಷ್ಕಫಲವದ್ಧ್ವನಸ್ತನಿ ರಾಮವೈರಿಭಗಿನೀವ ರಾಜಸೇ ॥

ಮಹಾಮಹೋಪಾಧ್ಯಾಯ ಕೋಲಾಚಲಮಲ್ಲಿನಾಥನ ರಸಜ್ಞತೆ ಅನನ್ಯವಾದದ್ದು. "ಮಾಘೇ ಮೇಘೇ ಗತಂ ವಯಃ" ಎಂದು ಮಾಘನ ಶಿಶುಪಾಲವಧ ಹಾಗೂ ಕಾಳಿದಾಸನ ಮೇಘದೂತಗಳ ಹೃದ್ಯ ಶೃಂಗಾರ ಸ್ವಾರಸ್ಯವನ್ನು ತನ್ನ ಸರ್ವಂಕಷಾ ಮತ್ತು ಸಂಜೀವಿನೀ ವ್ಯಾಖ್ಯಾನಗಳಿಂದ ಹೊರಹೊಮ್ಮಿಸಿ ನಲಿದ ಸಹೃದಯ ಶೇಖರ ಮಲ್ಲಿನಾಥ.

ಈ ಪಂಡಿತಪ್ರವರನು ಸರ್ವದಾ ಇತರ ಕಾವ್ಯಗಳ ನಾಯಿಕೆಯರ ವರ್ಣನ ಸೌಂದರ್ಯವನ್ನು ಪ್ರಸ್ತಾವಿಸಿ ಮೆಚ್ಚಿಕೊಳ್ಳುವುದೂ, ತನ್ನ ಕೃತಿಗಳಲ್ಲಿ ಇತಿಹಾಸ-ಪುರಾಣಗಳ ನಾಯಿಕೆಯರನ್ನು ಚಮತ್ಕಾರದಿಂದ ತಾನು ವರ್ಣಿಸುವುದೂ ಆತನ ಪತ್ನಿಗೊಮ್ಮೆ ಬೇಸರ ತಂದಿತಂತೆ. ಆಗ ಸ್ವಯಂ ವಿದುಷಿಯಾದ ಆಕೆ ಪತಿಯನ್ನು ಸಮಯ ನೋಡಿ ಕೇಳಿದಳು. "ಅಲ್ಲ ; ನೀವು ಯಾವಾಗಲೂ ಅನ್ಯ ಸ್ತ್ರೀಯರನ್ನು ವರ್ಣಿಸುತ್ತೀರಿ, ಇಲ್ಲವೇ ವ್ಯಾಖ್ಯಾನಿಸುತ್ತೀರಿ ! ನನ್ನನ್ನು ಮಾತ್ರ ಎಂದೂ ಬಣ್ಣಿಸಿಲ್ಲ ! ನಾನೇನು ನಿಮಗೆ ಕಾಣುವುದೇ ಇಲ್ಲವೇ ?" ಈಗ ದರಹಾಸದಿಂದ ಮಲ್ಲಿನಾಥ ಮೇಲಣ ರಥೋದ್ಧತಾವೃತ್ತವನ್ನು ಆಶುವಾಗಿ ಹೇಳಿದನಂತೆ ;

"ಹುಣಿಸೇಎಲೆಯಂಥ ಕಣ್ಣಿನವಳೇ ! ದೇಗುಲಗಳ ನಗಾರಿಯಂಥ ನಡುವಿನವಳೇ ! ಒಣಗಿದ ಎಕ್ಕದ ಕಾಯಿಯಂಥ ಎದೆಯವಳೇ ! ರಾಮನ ವೈರಿಯ ತಂಗಿಯಂತೆ (ಶೂರ್ಪಣಖಿ) ರಾರಾಜಿಸುತ್ತಿದ್ದೀಯೆ !!"

ಈ ವಿಡಂಬನೆಯನ್ನು ಕೇಳಿ ಆ ವ್ಯಾಖ್ಯಾನ ಸಾರ್ವಭೌಮನ ಸತಿ ಏನೆಂದಳೋ ಏನೋ !

—೨೫—

ಇತ್ಯರ್ಥಸ್ಸೂಪಿತಂ ಟೈವೇತಿಭಾವತೇಮನಂ ತಥಾ ।
ಪಕ್ವೇಕ್ಷ್ವೇತೇಽದ್ಯ ಭುಕ್ತ್ವಾರ್ಥಂ ತುಷ್ಯತಾಂ ಭವದಾಶಯಃ ॥

ತನ್ನ ವ್ಯಾಖ್ಯಾನಗಳಿಂದ ಚಿರಸ್ಥಾಯಿ ಕೀರ್ತಿ ಪಡೆದ ಮಲ್ಲಿನಾಥನು ಧ್ವನಿನಿರ್ಧಾರವೂ, ನಾನಾ ಪಾಠಾಂತರ ಪರಿಷ್ಕೃತವೂ ಆದ ಕಾಳಿದಾಸತ್ರಯಿಗೆ ; ಬಹುಶಾಸ್ತ್ರ ಕ್ಲಿಷ್ಟವೂ, ವಿಲಕ್ಷಣ ವ್ಯಾಕರಣ ಪ್ರಯೋಗ ಪುಷ್ಟವೂ ಆದ ಬೃಹತ್ತ್ರಯಿಗೆ (ಕಿರಾತಾರ್ಜುನೀಯ, ಶಿಶುಪಾಲವಧ, ನೈಷಧೀಯಚರಿತ) ಟೀಕೆಗಳನ್ನು ರಚಿಸುವುದಕ್ಕಾಗಿ ಅಪಾರ ವ್ಯುತ್ಪತ್ತಿ ಪಡೆಯಲು ಅಹರ್ನಿಶಿ ನಾನಾ ಗ್ರಂಥಾವಲೋಕನಗಳಲ್ಲಿ ಮಗ್ನನಾಗಿರುತ್ತಿದ್ದ. ಹೀಗಾಗಿ ಆತನಿಗೆ ಮನೆವಾರ್ತೆಯನ್ನು ಗಮನಿಸಿಕೊಳ್ಳಲೇ ಆಗುತ್ತಿರಲಿಲ್ಲ. ಸಾಧ್ವಿಯೂ, ದಕ್ಷಳೂ ಆದ ಆತನ ಸತೀಮಣಿಯೇ ಎಲ್ಲ ಗೃಹಕೃತ್ಯಗಳನ್ನೂ ಗಮನಿಸಿ ನಿರ್ವಹಿಸುತ್ತಿದ್ದಳು.

ಮಲ್ಲಿನಾಥನೋ ಈ ಬಗೆಯ ಪತ್ನಿಯ ಸಹಕಾರದಿಂದಾಗಿ ಮತ್ತಷ್ಟು ವಿದ್ಯಾವ್ಯಸನಿಯಾಗಿದ್ದ. ಮಹಾಕೃತಿಗಳಿಗೆ ವಿಶದವಾದ ವಿವರಣೆಗಳನ್ನು ಬರೆಯುತ್ತಾ 'ಇತ್ಯರ್ಥಃ' (ಹೀಗೆಂದು ಇದರ ಅರ್ಥ), 'ಇತಿ ಭಾವಃ' (ಹೀಗೆಂದು ಇದರ ಭಾವ) ಎಂದು ಅಲ್ಲಲ್ಲಿ ಒಕ್ಕಣಿಸುತ್ತಿದ್ದ ಮಾತುಗಳನ್ನೇ ಮೈಮರೆತು ಮನೆಯವರೊಡನೆ ಆಡುವಾಗಲೂ ಹೇಳಿಬಿಡುತ್ತಿದ್ದನಂತೆ.

ಒಮ್ಮೆ ಊಟಕ್ಕೆ ಕುಳಿತಾಗ ಮಲ್ಲಿನಾಥನು ಪತ್ನಿಯನ್ನು ಇಂದಿನ ಅಡುಗೆ ಯೇನೆಂದು ಕೇಳಿದಾಗ ಆ ವಿದುಷಿ ಚಾತುರ್ಯದಿಂದ ಮೇಲಿನ ಶ್ಲೋಕವನ್ನು ಆಶುವಾಗಿ ಹೇಳಿದಳು.

“ 'ಇತ್ಯರ್ಥ'ವೆಂಬ ಹುಳಿ ಹಾಗೂ 'ಇತಿ ಭಾವ'ವೆಂಬ ಮಜ್ಜಿಗೆಹುಳಿಗಳನ್ನು ನಿಮ್ಮ ಊಟಕ್ಕಾಗಿ ಸಿದ್ಧಪಡಿಸಲಾಗಿದೆ. ತಿಂದು ತೃಪ್ತಿಸಿ”

ಹಿಂದೆ ತನ್ನನ್ನು ವರ್ಣಿಸಿದ ವಿಶೇಷೋಕ್ತಿಗೆ ಸಮುಚಿತವಾಗಿ ಇಂದು ಮಲ್ಲಿ

ನಾಥನ ಗೃಹಿಣಿ ಪ್ರತಿಕ್ರಿಯೆ ತೋರಿ ಗೆದ್ದಿದ್ದಳು. ವಿದ್ಯಾವಂತರಾದ ದಂಪತಿಗಳಲ್ಲಿ ಹಾಸ್ಯಪ್ರಜ್ಞೆಯೂ ಇದ್ದರೆ ಅದೆಷ್ಟು ಸೊಗಯಿಸುವುದೆಂಬುದಕ್ಕೆ ಇಂಥ ಸಂದರ್ಭಗಳೇ ಸಾಕ್ಷಿ.

—೨೬—

ಬಾಲೋಽಹಂ ಜಗದಾನಂದ ! ನ ಮೇ ಬಾಲಾ ಸರಸ್ವತೀ ।
ಅಪೂರ್ಣೇ ಪಂಚಮೇ ವರ್ಷೇ ವರ್ಣಯಾಮಿ ಜಗತ್ತ್ರಯಂ ॥

ಮಿಥಿಲಾ ಪ್ರದೇಶದ ಅಮರಾವತೀಪುರಸಮೀಪದಲ್ಲಿದ್ದ 'ಸರಿಸವ' ಎಂಬ ಗ್ರಾಮವು ಷಟ್‌ಶಾಸ್ತ್ರ ಸಂಪನ್ನರಿಗೂ, ಕವಿಗಳಿಗೂ ತವರಾಗಿತ್ತು. ಇಲ್ಲಿ ಹದಿನಾಲ್ಕನೆಯ ಕ್ರಿಸ್ತಾಬ್ದದಲ್ಲಿ ಮಹಾಮಹೋಪಾಧ್ಯಾಯ ಶಂಕರಮಿಶ್ರ ಜನಿಸಿದ. (ಯಾರ ಶಿಷ್ಯ-ಪ್ರಶಿಷ್ಯರೂ ಗುರುವಿನಂತೆಯೇ ಮಹಾಪಂಡಿತರಾಗಿ ಪಾಠ ಹೇಳುತ್ತಿದ್ದರೋ ಅಂಥ ಗುರುವನ್ನು ಮಹಾಮಹೋಪಾಧ್ಯಾಯರೆನ್ನುತ್ತಿದ್ದರು.) ಶಂಕರಮಿಶ್ರನ ತಂದೆ ಭವನಾಥಮಿಶ್ರನು ದೊಡ್ಡ ನೈಯಾಯಿಕ. ಈತನು ಅಪರಿಗ್ರಹವ್ರತವನ್ನು ಹೊಂದಿದ್ದ.

ಶಂಕರಮಿಶ್ರನು ಬಾಲಮೇಧಾವಿಗಳಲ್ಲೊಬ್ಬ. ಅತೀವ ಶೈಶವದಿಂದಲೇ ತನ್ನ ವೈದುಷ್ಯವನ್ನು ತೋರಿಸಲಾರಂಭಿಸಿದ. ಒಮ್ಮೆ ಅವನು ತನ್ನ ಗೆಳೆಯರೊಡನೆ ಆಡುತ್ತಿರುವಾಗ ಮಹಾರಾಜ ಶಿವಸಿಂಹನು ಅತ್ತಕಡೆ ಬರುತ್ತಾ ಚೂಟಿಯಾದ ಶಂಕರಮಿಶ್ರನನ್ನು ನೋಡಿ ಮಾತನಾಡಿಸಿದ. ಬಳಿಕ ಯಾವುದಾದರೂ ಶ್ಲೋಕವನ್ನು ಹೇಳೆಂದೂ ಕೇಳಿದ. ಆಗ ಶಂಕರಮಿಶ್ರನು ಅನ್ಯರ ಶ್ಲೋಕವನ್ನು ಹೇಳುವುದೇ ಅಥವಾ ತನ್ನದೇ ಆದದ್ದನ್ನು ಹೇಳುವುದೇ ಎಂದು ರಾಜನನ್ನು ಪುನಃ ಪ್ರಶ್ನಿಸಲು ವಿಸ್ಮಿತನಾದ ಶಿವಸಿಂಹನು 'ನೀನಿನ್ನೂ ಬಾಲಕ, ನಿನಗೆ ಸ್ವಂತವಾಗಿ ಕವಿತೆ ಕಟ್ಟಲು ಸಾಧ್ಯವೇ ?' ಎಂದು ಪ್ರತಿಕ್ರಿಯಿಸಿದ. ಆಗ ಆಶುಮಾರ್ಗದಿಂದ ಶಂಕರಮಿಶ್ರನು ಮೇಲಿನ ಶ್ಲೋಕವನ್ನು ಪಠಿಸಿದ.

"ಜಗದಾನಂದವಾದ ರಾಜನೇ ! ನಾನು ಬಾಲಕನಿರಬಹುದು, ಆದರೆ ನನ್ನ ಕವಿತೆಗೆ ಬಾಲ್ಯವಿಲ್ಲ (ಅದು ಪ್ರೌಢವೇ). ನನಗಿನ್ನೂ ಐದು ವರ್ಷವೂ ಆಗಿಲ್ಲ, ಆದರೂ ಕವಿತೆಯಿಂದ ಮೂರು ಲೋಕವನ್ನು ವರ್ಣಿಸಬಲ್ಲೆ !"

ಶಿವಸಿಂಹನು ಈ ಆತ್ಮವಿಶ್ವಾಸಕ್ಕೆ ಬೆರಗು ಬಡಿದು ಹೋದ.

—೨೭—

ಚಲಿತಶ್ಚಕಿತಶ್ಛನ್ನ । ಪ್ರಯಾಣೇ ತವ ಭೂಪತೇ ।
ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಸ್ಸಹಸ್ರಪಾತ್ ॥

ಮಹಾರಾಜ ಶಿವಸಿಂಹನು ಶಂಕರಮಿಶ್ರನನ್ನು—ಅವನ ಬಾಲ್ಯದ ಅದ್ಭುತ ಪ್ರತಿಭೆಯನ್ನರಿತು—ಆಸ್ಥಾನಕ್ಕೆ ಕರೆಯಿಸಿ ಆಶುಕವಿತೆಯ ಪ್ರವಾಹವನ್ನೇ ಹರಿಯಿಸಿದ. ಕಡೆಗೆ ಒಂದು ವೈದಿಕಮಂತ್ರದ ಉತ್ತರಾರ್ಧವೂ, ಸ್ವಕಲ್ಪಿತ ಪೂರ್ವಾರ್ಧವೂ ಇರುವ ಶ್ಲೋಕವೊಂದನ್ನು ಹೇಳಲು ಕೋರಿದ. ಕೂಡಲೇ ಶಂಕರಮಿಶ್ರನು ಮೇಲಣ ಶ್ಲೋಕವನ್ನು ರಚಿಸಿದ.

"ರಾಜನೇ ! ನಿನ್ನ ಪ್ರಯಾಣವು (ದಿಗ್ವಿಜಯಕ್ಕಾಗಿ) ಸಾಗಲು ಸಾವಿರ ಹೆಡೆಗಳ ಶೇಷನೂ ಅಲ್ಲಾಡುವನು, ಸಾವಿರ ಕಣ್ಣುಗಳ ಇಂದ್ರನೂ ಬೆರಗಾಗುವನು, ಸಾವಿರ ಕಿರಣಗಳ ಸೂರ್ಯನೂ (ಧೂಳಿನಿಂದ) ಮರೆಯಾಗುವನು" (ಇಲ್ಲಿ ಉತ್ತರಾರ್ಧವು ಪುರುಷಸೂಕ್ತದ ಮೊದಲ ಋಕ್ಕಿನ ಎರಡು ಪಾದಗಳು)

ಶಿವಸಿಂಹನು ಕೂಡಲೇ ಈತನಿಗೆ ತನ್ನ ಕೋಶಾಗಾರದಿಂದ ಎಷ್ಟು ಧನವನ್ನಾದರೂ ಕೊಂಡೊಯ್ಯಬಹುದೆಂದ. ಬಾಲಕ ಶಂಕರಮಿಶ್ರನು ಅಲ್ಲಿಗೆ ಹೋಗಿ ಚಿನ್ನದ ನಾಣ್ಯಗಳನ್ನು ಬೊಗಸೆಯಲ್ಲಿ ತುಂಬಿಕೊಂಡು ಕೊಂಡೊಯ್ಯಲು ಯಾವುದನ್ನೂ ಕಾಣದೆ ಉಟ್ಟ ಪಾಣಿಪಂಚೆಯಲ್ಲಿಯೇ ಗಂಟಿಕ್ಕಿ ಮನೆಗೆ ಹೊರಟುನಿಂತ ! ಆದರೆ ಇವನು ಜನಿಸಿದಾಗ ಸೂಲಗಿತ್ತಿಗೆ ಬಹುಮಾನ

ಕೊಡಲು ಧನವಿಲ್ಲದುದರಿಂದ ಈತನ ತಾಯಿ ಅವಳಿಗೆ ತನ್ನ ಮಗನ ಮೊದಲ ಸಂಭಾವನೆಯನ್ನು ಕೊಡುವುದಾಗಿ ಮಾತು ಕೊಟ್ಟಿದ್ದಳು. ಅಂತೆಯೇ ರಾಜ ಸಂಭಾವನೆಯನ್ನೆಲ್ಲವನ್ನೂ ಮಾತುತಪ್ಪದೆ ಸೂಲಗಿತ್ತಿಗೆ ಸಲ್ಲಿಸಲಾಯಿತು. ಆಕೆಯಾದರೋ ಈ ಅನಿರೀಕ್ಷಿತ ಸಂಪತ್ತನ್ನು ಸ್ವಾರ್ಥಕ್ಕೆ ಬಳಸದೆ 'ಸರಿಸವ' ಗ್ರಾಮದಲ್ಲಿ ಕೆರೆ-ಕೊಳ-ಕಟ್ಟೆಗಳನ್ನು ನಿರ್ಮಿಸಲು ವೆಚ್ಚಮಾಡಿದಳೆಂದು ಇಂದಿಗೂ ಆ ಗ್ರಾಮಸ್ಥರು ಹೇಳಿ, ಆಯಾ ಕಾರ್ಯಗಳನ್ನು ತೋರಿಸುತ್ತಾರೆ.

–೨೮–

ಅಧೀತಮಧ್ಯಾಪಿತಮರ್ಜಿತಂ ಯಶೋ
ನ ಶೋಚನೀಯಂ ಕಿಮಪೀಹ ಭೂತಲೇ ।
ಅತಃ ಪರಂ ಶ್ರೀಭವನಾಥಶರ್ಮಣೋ
ಮನೋ ಮನೋಹಾರಿಣಿ ಜಾಹ್ನವೀತಟೇ ॥

ತಂದೆಯಾದ ಭವನಾಥಮಿಶ್ರನಿಂದ ಸಕಲವಿದ್ಯೆಗಳನ್ನೂ ಕಲಿತ ಶಂಕರಮಿಶ್ರ, ಗೌರೀದಿಗಂಬರಪ್ರಹಸನ, ಕೃಷ್ಣವಿನೋದ ನಾಟಕ, ಮನೋಭವ ಪರಾಭವ ನಾಟಕ, ರಸಾರ್ಣವ, ದುರ್ಗಾಟೀಕಾ, ಛಂದೋಗಾಹ್ನಿಕೋದ್ಧಾರ, ವಾದಿವಿನೋದ, ವೈಶೇಷಿಕ ಸೂತ್ರ ವಿವರಣೆಯಾಗಿ 'ಉಪಸ್ಕಾರ', ಉದಯನನ ಕುಸುಮಾಂಜಲಿಯ ಮೇಲೆ 'ಆಮೋದ' ವ್ಯಾಖ್ಯಾನ, ಶ್ರೀಹರ್ಷನ 'ಖಂಡನ ಖಂಡಖಾದ್ಯ'ಕ್ಕೆ ವ್ಯಾಖ್ಯಾನವೇ ಮೊದಲಾದ ಕಾವ್ಯ-ಶಾಸ್ತ್ರಗಳನ್ನು ರಚಿಸಿ ಪ್ರಖ್ಯಾತನಾದ.

ಆಗ ಕೃತಕೃತ್ಯನೆನಿಸಿದ ಭವನಾಥನು ವೈರಾಗ್ಯಕ್ಕೆ ತಿರುಗಲೆಳಸಿ ಮಗನಿಗೆ ಮೇಲಿನ ವಂಶಸ್ಥ ವೃತ್ತದ ಪೂರ್ವಾರ್ಧವನ್ನು ಹೇಳಿದನಂತೆ.

"ಓದಿದೆ, ಓದಿಸಿದೆ, ಕೀರ್ತಿಯನ್ನು ಪಡೆದೆ; ಇನ್ನು ಬಯಸಿ ಬರಲಿಲ್ಲವೆಂದು ಹಲುಬುವಂಥ ವಸ್ತುವಾವುದೂ ನನಗೆ ಲೋಕದಲ್ಲಿಲ್ಲ" ಕೂಡಲೆ ತಂದೆಯ ಇಂಗಿತವನ್ನರಿತ ಶಂಕರಮಿಶ್ರ ಹೀಗೆ ಉತ್ತರಾರ್ಧವನ್ನು ಪೂರಿಸಿದ.

“ಇನ್ನು ಮೇಲೆ ಭವನಾಥಮಿಶ್ರನ ಮನಸ್ಸು ರಮಣೀಯವಾದ ಗಂಗಾತೀರದಲ್ಲಿ ನೆಲಸುವುದು”.

ಅಂತೆಯೇ ಭವನಾಥನು ಕಾಶಿಯಲ್ಲಿ ಸನ್ಯಸಿಸಿ ಸಿದ್ಧಿ ಪಡೆದ.

—೨೯—

ತರ್ಕಕರ್ಕಶವಿಚಾರಚಾತುರೀ ಕಾ ತುರೀಯವಯಸಾ ವಿಭಾವ್ಯತೇ ।
ಆತುರೀಭವತಿ ಯತ್ರ ಮಾನಸಂ ಧಾತುರೀಪ್ಸಿತಮುಪಾಕರೋತಿ ಯಃ ॥

ಭವನಾಥಮಿಶ್ರನು ಸಂನ್ಯಾಸವನ್ನು ಪಡೆದು ಕಾಶಿಯಲ್ಲಿ ನೆಲೆಸಿದ ಬಳಿಕವೂ ಅಲ್ಲಿ ವೇದಾಂತಬೋಧೆಗಿಂತಲೂ ಮಿಗಿಲಾಗಿ ತರ್ಕವನ್ನು ಪಾಠ ಹೇಳುವ ಪಾಡೇ ಬಂದಿತಂತೆ.

ಕೇವಲ ತರ್ಕವನೋದಿದರೆ ಮುಂದಿನ ಜನ್ಮದಲ್ಲಿ ಶೃಗಾಲತ್ವ ಬರುವುದೆಂದು ತಾರ್ಕಿಕರೇ ಅಂತ್ಯದಲ್ಲಿ ಸ್ವಲ್ಪವಾದರೂ ವೇದಾಂತವನ್ನು ಓದುವಾಗ ವೇದಾಂತಿಯಾಗಿ ಪರಿವ್ರಜ್ಯೆಯನ್ನು ಹೊಂದಿದ ಈತನು ಈ ರೀತಿ ತರ್ಕದಲ್ಲಿ ಮುಳುಗಿರುವುದನ್ನು ಕಂಡು ಒಬ್ಬ ಪ್ರಾಜ್ಞನಾದ ಹಿರಿಯ ಸಂನ್ಯಾಸಿ ಹೀಗೆ ಕೇಳಿದ.

“ತರ್ಕಕರ್ಕಶವಾದ ಈ ವಿಚಾರವೈಖರಿಯು ಈ ರೀತಿಯ ಸಂನ್ಯಾಸಾಶ್ರಮದಲ್ಲಿ ಶೋಭಿಸುವುದೇ ? ಈ ತರ್ಕವು ಮನಸ್ಸನ್ನು ಕ್ಷೋಭಗೊಳಿಸದೇ ?”

ಕೂಡಲೇ ಭವನಾಥಮಿಶ್ರನು ಆ ಸಂನ್ಯಾಸಿಯ ತ್ರಿಪಾದಾತ್ಮಕವಾದ ಮೇಲಿನ ರಥೋದ್ಧತಾ ವೃತ್ತಕ್ಕೆ ನಾಲ್ಕನೆಯ ಪಾದವನ್ನಿಂತು ಸೇರಿಸಿದ.

“ಬ್ರಹ್ಮನ ಬರೆಹವನ್ನು ಅಳಿಸುವವರಾರು ?”

ತಾತ್ಪರ್ಯದಿಂದ ಭುವನಾಥನು ತನ್ನ ತರ್ಕಬುದ್ಧಿ ವೇದಾಂತದತ್ತ ತಿರುಗುವುದೂ ದೇವರ ಕೈಯಲ್ಲಿದೆಯೆಂದಿದ್ದ !

ಕಡೆಗೆ ಶುದ್ಧವಾಗಿ ವೇದಾಂತದಲ್ಲಿಯೇ ಪರಿನಿಷ್ಠಿತನಾಗಿ ಈತನು ಸಿದ್ಧಿ ಹೊಂದಿದ.

—೩೦—

ಕರ್ಮಾವಲಂಬಕಾಃ ಕೇಚಿತ್ ಕೇಚಿತ್ ಜ್ಞಾನಾವಲಂಬಕಾಃ ।
ವಯಂ ತು ಹರಿದಾಸಾನಾಂ ಪಾದರಕ್ಷಾವಲಂಬಿನಃ ॥

ಕ್ರಿ.ಶ. 14–15ನೆಯ ಶತಮಾನ ಸಂಧಿಯಲ್ಲಿದ್ದ ಶ್ರೀ ವೇದಾಂತದೇಶಿಕರೆಂಬ ಹೆಸರಿನ ವೇಂಕಟನಾಥರು ಮಹಾಮಹಿಮರೂ ಪ್ರಚಂಡಪಂಡಿತಕವಿಗಳೂ ಆಗಿದ್ದರು. ಇವರ ವಿದ್ಯೆ-ವೈರಾಗ್ಯ-ವಿನಯಗಳು ಅನನ್ಯ. 'ಕವಿತಾರ್ಕಿಕ ಸಿಂಹ' ಎಂಬ ಇವರ ಬಿರುದು ಅನ್ವರ್ಥ. ವಿಶಿಷ್ಟಾದ್ವೈತ ತತ್ತ್ವದಲ್ಲಿ ಇವರನ್ನು ಮೀರಿಸಿದ ಮಹನೀಯರಿಲ್ಲ. ಇಪ್ಪತ್ತು ವರ್ಷಕ್ಕೇ ಶ್ರೀಭಾಷ್ಯವನ್ನು ಮೂವತ್ತು ಬಾರಿ ಪಾಠ ಹೇಳಿ ಸಕಲಶಾಸ್ತ್ರನಿಷ್ಣಾತರಾಗಿದ್ದರು. ಉದ್ದಂಡಕವಿತ್ವವು ಇವರ ನಿರಂತರವಶವರ್ತಿ.

ಇಂಥ ಮಹನೀಯರನ್ನು ತೆಂಗಲೆ–ವಡಗಲೆ ಶಾಖಾಭೇದಗಳ ವಾದದಲ್ಲಿ ಎಳೆಯಲು ಧೂರ್ತರು ಎಷ್ಟು ಯತ್ನಿಸಿದರೂ ಇವರು ಭಾಗವತಾಪಚಾರವಾಗುವುದೆಂದು ಸ್ವಪಕ್ಷವಾದದಲ್ಲಿ ತೊಡಗುತ್ತಿರಲಿಲ್ಲ. ಇದನ್ನು ದೇಶಿಕರ ಅಶಕ್ತಿಯೆಂದು ಭಾವಿಸಿ ಒಮ್ಮೆ ಆ ಸಂಕುಚಿತಮತಿಗಳು ಇವನ್ನು ಗೇಲಿಮಾಡಬೇಕೆಂದು ತಮ್ಮ ತಮ್ಮ ಪಾದರಕ್ಷೆಗಳನ್ನು ತೋರಣಮಾಲಿಕೆಯಂತೆ ಶ್ರೀರಂಗದಲ್ಲಿದ್ದ ದೇಶಿಕರ ಮನೆಯ ಬಾಗಿಲಿಗೆ ಕಟ್ಟಿದರು. ಈ ಸಂಗತಿಯನ್ನರಿಯದೆ ಯಥಾಕಾಲದಲ್ಲಿ ಮನೆಯಿಂದ ಹೊರಟ ದೇಶಿಕರು ಬಾಗಿಲುವಾಡದ ತೋರಣವನ್ನು ಕಂಡು ನಮಸ್ಕರಿಸಿ ಸದ್ಯಃಸ್ಫೂರ್ತಿಯಿಂದ ಮೇಲಣ ಶ್ಲೋಕವನ್ನು ಆಶುವಾಗಿ ಹೇಳಿದರು.

"ಕೆಲವರು ಕರ್ಮವನ್ನು ಅವಲಂಬಿಸುತ್ತಾರೆ(ಮೀಮಾಂಸಕರು), ಕೆಲವರು ಜ್ಞಾನವನ್ನು ಅವಲಂಬಿಸುತ್ತಾರೆ (ವೇದಾಂತಿಗಳು); ಆದರೆ ನಾವು (ಪಾಂಚರಾತ್ರಿಗಳು) ಹರಿದಾಸರ (ಭಾಗವತರು ಭಗವಂತನಿಗಿಂತಲೂ ಮಹಿಮಾನ್ವಿತರು. ಏಕೆಂದರೆ ಭಗವಂತನು ತನಗಾದ ಅಪಚಾರವನ್ನು ಸಹಿಸುವನು. ಆದರೆ ತನ್ನ ಭಕ್ತರಿಗಾದ ಭಾಗವತಾಪಚಾರವನ್ನು ಸಹಿಸನೆಂದು ಶ್ರೀವೈಷ್ಣವ ಸಮಯ) ಪಾದರಕ್ಷೆಯನ್ನವಲಂಬಿಸುತ್ತೇವೆ."

ಹೀಗೆ ಇಂಥ ಸಂದರ್ಭದಲ್ಲಿಯೂ ತಮ್ಮ ಔನ್ನತ್ಯವನ್ನು ಮೆರೆದ ದೇಶಿಕರನ್ನು ಕಂಡು ಆ ತಂತ್ರಿಗಳು ಲಜ್ಜಿತರಾಗಿ ಕ್ಷಮೆ ಬೇಡಿದರು.

—೩೧—

ಸೂತೇ ಸೂಕರಯುವತೀ ಸುತಶತಮತ್ಯಂತದುರ್ಭಗಂ ಝಟಿತಿ ।
ಕರಿಣೀ ಚಿರಾಯ ಸೂತೇ ಸಕಲಮಹೀಪಾಲಲಾಲಿತಂ ಕಲಭಂ ॥

ಶ್ರೀದೇಶಿಕರು ಶ್ರೀರಂಗದಲ್ಲಿರುವಾಗ ಶ್ರೀವೈಷ್ಣವ ಶಾಖಾಭೇದ ಕಲಹಗಳಲ್ಲಿಯೇ ಸುಖ ಕಾಣುವ ಮತಾಂಧರೊಮ್ಮೆ ಸಂಜೆಯಲ್ಲಿ ಶ್ರೀರಂಗನಾಥನ ಸೇವಾಕಾಲಕ್ಕೆ ಸರಿಯಾಗಿ ಆಗಮಿಸಿದ ದೇಶಿಕರನ್ನು ಅಳಹಿಯಮಣವಾಳ ಪೆರುಮಾಳರೊಡನೆ ಸ್ಪರ್ಧಿಸಬೇಕೆಂದು ನಿರ್ಬಂಧಿಸಿದರು. ಒಂದೇ ರಾತ್ರಿಯಲ್ಲಿ ದೇಶಿಕರು ಭಗವಂತನ ಪಾದುಕೆಗಳ ಮೇಲೂ, ಪ್ರತಿಪಕ್ಷದವರು ಪಾದಗಳ ಮೇಲೂ ಸಾವಿರ ಪದ್ಯಗಳನ್ನು ಕಟ್ಟಬೇಕೆಂದೂ, ಹೀಗೆ ಒಪ್ಪದಿದ್ದಲ್ಲಿ ದೇಶಿಕರು ಸರ್ವತಂತ್ರಸ್ವತಂತ್ರ, ಕವಿತಾರ್ಕಿಕಕೇಸರಿಯೇ ಮೊದಲಾದ ಉಪಾಧಿಗಳನ್ನು ಬಿಡಬೇಕೆಂದೂ ಆಗ್ರಹಿಸಿದರು. ವಸ್ತುತಃ ಸ್ಪರ್ಧಾಶೀತರೂ, ಉಪಶಾಂತರೂ ಆದ ದೇಶಿಕರು ವಿಧಿಯಿಲ್ಲದೆ ಒಪ್ಪಬೇಕಾಯಿತು.

ವೇಂಕಟನಾಥರು ಯಥಾಕಾಲದಲ್ಲಿ ತಮ್ಮ 'ಪಾದುಕಾಸಹಸ್ರ'ವೆಂಬ ಅದ್ಭುತ ಸಾಹಿತ್ಯಸಂಹಿತೆಯನ್ನು ರಚಿಸಿದರು. ಮೂವತ್ತೆರಡು ಪದ್ಧತಿಗಳಲ್ಲಿ

ವಿಖ್ಯಾತವಾದ ಈ ಗ್ರಂಥ ಮುಂದೆ ಎಷ್ಟೋ ಸಹಸ್ರಗಳಿಗೆ ಸ್ಫೂರ್ತಿಕೇಂದ್ರವಾಯಿತು. ಆದರೆ ಪ್ರತಿಪಕ್ಷದ ಪಂಡಿತರು ಕೇವಲ ಮುನ್ನೂರು ಪದ್ಯಗಳನ್ನು ರಚಿಸಿ ಉಳಿದುದನ್ನು ಪೂರೈಸಲಾಗದೆ ಸೋತಿದ್ದರು. ಆಗಲೂ ಸಹ ಶ್ರೀದೇಶಿಕರು ತಮ್ಮ ನಿಸರ್ಗಸಹಜ ವಿನಯದಿಂದ ಮೇಲಿನ ಪದ್ಯವನ್ನು ಆಶುವಾಗಿ ಹೇಳಿ ಎದುರಾಳಿಯ ಮನಸ್ಸಿಗೆ ಸಾಂತ್ವನನೀಡಿದರು.

"ಹಂದಿಯು ತನ್ನ ಹಾಳು ಹೊಟ್ಟೆಯಿಂದ ನೂರಾರು ಮರಿಗಳನ್ನು ಬೇಗದಲ್ಲಿಯೇ ಹೆರುವುದು. ಆದರೆ ತಡವಾಗಿಯಾದರೂ ಆನೆಯು ಹಾಕಿದ ಮರಿಯು ರಾಜರುಗಳಿಂದ ಪೋಷಿತವಾಗುತ್ತದೆ."

ಈ ಅನ್ಯೋಕ್ತಿಯಿಂದ ನೈಚ್ಯಾನುಸಂಧಾನವನ್ನು ಭಾಗವತಧರ್ಮಕ್ಕೆ ತಕ್ಕಂತೆ ತೋರಿದ್ದರು. ಶ್ರೀಮದಪ್ಪಯ್ಯದೀಕ್ಷಿತರು ಶಿವಾರಾಧನಪರರಾಗಿದ್ದರೂ ದೇಶಿಕರಲ್ಲಿ ಭಕ್ತಿಯಿರಿಸಿ ಅವರ ಪಾದುಕಾಸಹಸ್ರ, ಯಾದವಾಭ್ಯುದಯಾದಿಗಳಿಗೆ ವ್ಯಾಖ್ಯಾನ ರಚಿಸಿದರೆಂದಮೇಲೆ ಕವಿತಾರ್ಕಿಕಸಿಂಹರ ಮಹತ್ತ್ವ ಅರಿವಾದೀತು.

—೩೨—

ಇಂದ್ರನೀಲೇ ನ ರಾಗೋಽಸ್ತಿ ಪದ್ಮರಾಗೇ ನ ನೀಲಿಮಾ ।
ಉಭಯಂ ಮಯಿ ಭಾತೀತಿ ಹಂತ ! ಗುಂಜಾ ವಿಜೃಂಭತೇ ॥

ಸಂಸ್ಕೃತಸಾಹಿತ್ಯಸಂವರ್ಧನ-ಸಂರಕ್ಷಣಗಳಿಗಾಗಿ ಭಗವತ್ಕಲ್ಪಿತವಾದ ರತ್ನಮಂಜೂಷೆಯೇ ಕೇರಳ. ಇಂದಿಗೂ ಸಂಸ್ಕೃತದ ಅನೇಕ ಅಪೂರ್ವ ಮುಖಗಳ ಅಕ್ಷತ ಸ್ವರೂಪವನ್ನಲ್ಲಿ ಕಾಣಬಹುದು. ಕೇರಳವು ಹೊರಗಿನಿಂದ ಬಂದ ಪಂಡಿತರನ್ನೂ ಆಪ್ಯಾಯವಾಗಿ ಆದರಿಸಿತು. ಅಂಥ ಉದ್ದಂಡಪಂಡಿತರಲ್ಲಿ ಅಗ್ರಗಣ್ಯ ಉದ್ದಂಡಶಾಸ್ತ್ರಿ. ಈತ ಮೂಲತ ತೊಂಡಮಂಡಲ(ತಮಿಳು

ಪಾಡು)ದವನು. ಕ್ರಿ.ಶ. ಹದಿನೈದನೆಯ ಶತಾಬ್ದದ ಈ ಕವಿ ತರ್ಕ–ವ್ಯಾಕರಣ-ಮೀಮಾಂಸೆ-ವೇದಾಂತ-ಸಾಹಿತ್ಯಾದಿಗಳಲ್ಲಿ ನಿಷ್ಣಾತನಾಗಿ, ವಾದಿವೃಂದ ನಿಕೃಂತನ ಕುಠಾರನೆನಿಸಿ, ಕರ್ನಾಟ–ಕಳಿಂಗ–ಆಂಧ್ರ–ತುಂಡೀರಮಂಡಲಗಳಲ್ಲಿ ಸಂಚರಿಸಿಪ್ರೌಢಿಯನ್ನು ಮೆರೆದಿದ್ದ.

ಈತನಿಗೆ ತಕ್ಕ ಪ್ರತಿಸ್ಪರ್ಧಿ ದಾಮೋದರಭಟ್ಟ. ಹನ್ನೆರಡನೆಯ ವಯಸ್ಸಿಗೇ ಸಕಲಶಾಸ್ತ್ರಗಳನ್ನು (ಮೇಧಾಜನನ ಸಂಸ್ಕಾರ ಬಲದಿಂದಾಗಿ) ಬಲ್ಲ ಧೀರ. ಅಲ್ಲದೆ ಅನ್ಯದೇಶೀಯನೊಬ್ಬ ನಮ್ಮನ್ನು ಮೆಟ್ಟಿ ನಿಲ್ಲುವಂಥ ವಿದ್ಯಾಧಿಕ್ಯದಿಂದ ಮೆರೆಯುತ್ತಿದ್ದಾನಲ್ಲಾ ! ಎಂದು ಕಳವಳಿಸುವ ನಂಬೂದಿರಿಗಳ ಆಹಾಕರಣ.

ಒಮ್ಮೆ ಯಾದೃಚ್ಛಿಕವಾಗಿ ಉದ್ದಂಡಶಾಸ್ತ್ರಿಯು ತನಗೆ ಸರಸ್ವತಿಯ ಎರಡು ಮಹಾಮಣಿಗಳಾದ ಸಂಗೀತ ಮತ್ತು ಸಾಹಿತ್ಯಗಳಲ್ಲಿ ಪ್ರಾವೀಣ್ಯವುಂಟೆಂದು ಹೇಳಿಕೊಂಡ. ಈ ಸುದ್ದಿ ಕೇಳಿದೊಡನೆಯೇ ಬಾಲಕ ದಾಮೋದರಭಟ್ಟ ಮೇಲಣ ಶ್ಲೋಕವನ್ನು ಆಶುವಾಗಿ ರಚಿಸಿ ಉದ್ದಂಡನ ಕಿವಿಗೆ ಬೀಳುವಂತೆ ಮಾಡಿದ.

"ಇಂದ್ರನೀಲಮಣಿಗೆ ಕೆಂಪುಬಣ್ಣವಿಲ್ಲ, ಪದ್ಮರಾಗಮಣಿಗೆ ನೀಲಿ (ಕಪ್ಪು) ಬಣ್ಣವಿಲ್ಲ. ಆದರೆ ಈ ಎರಡೂ ಬಣ್ಣಗಳೂ ನನ್ನಲ್ಲಿವೆಯೆಂದು ಗುಲಗಂಜಿಯು ಅಟ್ಟಹಾಸಮಾಡುತ್ತಿದೆಯಲ್ಲಾ !!"

ಈ ವ್ಯಂಗ್ಯೋಕ್ತಿಯಿಂದಾಗಿ ಉದ್ದಂಡನನ್ನು ಸಂಗೀತಸಾಹಿತ್ಯಗಳ ಗಂಧ ಮಾತ್ರ ಇರುವ ಪಲ್ಲವಗ್ರಾಹಿಪಾಂಡಿತ್ಯದವನೆಂದು ನಯವಾಗಿಯೇ ಗೇಲಿ ಮಾಡಿದ ದಾಮೋದರಭಟ್ಟ "ವಸುಮತೀ ಮಾನವಿಕ್ರಮ" ಎಂಬ ಏಳಂಕಗಳ ನಾಟಕವನ್ನೂ ಬರೆದಿದ್ದ.

—೩೩—

ನ ಛತ್ರಂ ನ ತುರಂಗಮೋ ನ ವದತಾಂ ವೃಂದಾನಿ ನೋ ವಂದಿನೋ
ನ ಶ್ಮಶ್ರೂಣಿ ನ ಪಟ್ಟಬಂಧವಸನಂ ನಹ್ಯಂಬರಾಡಂಬರಂ ।
ಅಸ್ತ್ಯಸ್ಮಾಕಮಮಂದಮಂದರಗಿರಿಪ್ರೋದ್ಧೂತದುಗ್ಧೋದಧಿ-
ಪ್ರೋದ್ಯದ್ವೀಚಿಪರಂಪರಾಪರಿಣತಾ ವಾಣೀ ತು ನಾಣೀಯಸೀ ॥

ಉದ್ದಂಡಕವಿಯನ್ನು ಗುಲಗಂಜಿಯಂತೆ ಮೂಲ್ಯವಿಲ್ಲದವನೆಂದು ವಿಡಂಬಿಸಿದ ಬಳಿಕ ದಾಮೋದರ ಭಟ್ಟನು ವಾದಕ್ಕೂ ಸಿದ್ಧನಾದ. ಇನ್ನೂ ಬಾಲಕನಾಗಿದ್ದ ಭಟ್ಟನನ್ನು ಆತನ ಹಳ್ಳಿಯಿಂದ ಸೇವಕನೊಬ್ಬನು ಎತ್ತಿಕೊಂಡು ವಾದವು ನಿಶ್ಚಿತವಾಗಿದ್ದ ಸ್ಥಳಕ್ಕೆ ಕರೆತಂದನಂತೆ! ವಾದಭೂಮಿಗೆ ಬರುತ್ತಿದಂತೆಯೇ ದಾಮೋದರ ಭಟ್ಟನು ಮೇಲಣ ಪದ್ಯವನ್ನು ಹೇಳಿದ.

"ನನಗೆ ಛತ್ರಚಾಮರಗಳಿಲ್ಲ, ಕುದುರೆ-ಪರಿವಾರಗಳಿಲ್ಲ, ವಂದಿಮಾಗಧರಿಲ್ಲ, ಗಡ್ಡಮೀಸೆಗಳಿಲ್ಲ, ಪೇಟ-ಕುರಾಯಿಗಳಿಲ್ಲ, ಡೌಲಿನ ಬಟ್ಟೆಗಳೂ ಇಲ್ಲ. ಆದರೆ ಅಸಾಧಾರಣವಾದ, ಮಂದರಗಿರಿಯಿಂದ ಕ್ಷೀರಸಾಗರವನ್ನು ಮಥಿಸಿದಾಗ ಓಲಾಡಿ ಪರಂಪರೆಯಾಗಿ ದಡಗಳಿಗೆ ಅಪ್ಪಳಿಸುವ ಅಲೆಗಳ ವೈಖರಿಯಂತೆ ಅಪರ್ಯಾಪ್ತವಾದ, ಮಹೋನ್ನತವಾದ ವಾಗ್ವಿಲಾಸವುಂಟು!"

ಇಂಥ ಆತ್ಮವಿಶ್ವಾಸವನ್ನು ಕಂಡು ಉದ್ದಂಡನು ತಕ್ಕ ಪ್ರತ್ಯುತ್ತರವನ್ನೇ ಕೊಟ್ಟ. ಬಳಿಕ ಆಖ್ಯಾನ-ಪ್ರತ್ಯಾಖ್ಯಾನಗಳಿಂದ ಮಾತು ಮುಂದುವರೆದಾಗ ಉದ್ದಂಡಶಾಸ್ತ್ರಿ ದಾಮೋದರನ ಆಕೃತಿಯನ್ನು ಕಂಡು 'ಆಕಾರೋ ಹ್ರಸ್ವಃ' ಎಂದು ಪ್ರಾಸಾಧಿಕವಾಗಿ ವಿಮರ್ಶಿಸಿದಾಗ ಕೂಡಲೇ ಚತುರತೆಯಿಂದ ದಾಮೋದರನು 'ಆಕಾರ ಏವ ಹ್ರಸ್ವಃ, ನಾಽಕಾರಃ.' ಎಂದು ಚಮತ್ಕರಿಸಿ ಉದ್ದಂಡನನ್ನು ನಿಬ್ಬೆರಗಾಗಿಸಿದನಂತೆ. (ಆಕಾರ ಎಂದರೆ ಆಕೃತಿ ಎಂದೂ 'ಆ' ಎಂಬ ಸ್ವರ ಎಂದೂ ಅರ್ಥಗಳಿವೆ; ಹ್ರಸ್ವ ಎನ್ನುವುದನ್ನು "ಚಿಕ್ಕ"

ಎಂಬುದಕ್ಕಲ್ಲದೆ ಸ್ವರದ ಎರಡು ಬಗೆಗಳಲ್ಲೊಂದಕ್ಕೂ ಬಳಸುತ್ತಾರೆ). ಆ ಬಳಿ
ದಾಮೋದರನು ತಾನು ತನ್ನ ತರ್ಕ ವ್ಯಾಕರಣ ಮೀಮಾಂಸೆಗಳ ಬಲದಿಂದಾಗಿ
ಸರಿಯಾದುದನ್ನು ತಪ್ಪೆಂಬಂತೆಯೂ, ತಪ್ಪಾದುದನ್ನು ಸರಿಯೆಂಬಂತೆಯೂ ;
ಅಪ್ರಮಾಣವನ್ನು ಸುಪ್ರಮಾಣವೆಂಬಂತೆಯೂ, ಇದ್ದುದನ್ನು ಇಲ್ಲದ್ದಾಗಿಯೂ,
ಇಲ್ಲದ್ದನ್ನು ಇದ್ದಂತೆಯೂ ಸ್ಥಾಪಿಸಬಲ್ಲೆನೆಂದು ವೀರಾಲಾಪಗಳನ್ನು ಮಾಡಿ
ಮುಂದುವರೆದನಂತೆ. ಈ ಬಗೆಯ ವಾದಗಳು ಮಧ್ಯಕಾಲೀನ ವಿದ್ವಾಂಸರ
ಪಾಂಡಿತ್ಯವೀರಕ್ಕೆ ಸಾಕ್ಷಿಗಳು.

## -೩೪-

ಕಾಂತ। ಕಪಾಲೀ ಕತಿವಾಟಿಕಾ ತೇ ಮೇನೇತಿ ಮಾತುಸ್ತವ ನಾಮಧೇಯಂ।
ಕಥಂ ನು ಭದ್ರೇ ವಲಯಾಲಯಸ್ಥೇ ವದಾನ್ಯತಾ ಮಾದೃಶಿ ಬೋಭವೀತು ।

'ಮಲ್ಲಿಕಾಮಾರುತ'ವೆಂಬ ಪ್ರಕರಣ, 'ಕೋಕಿಲಸಂದೇಶ'ವೆಂಬ ಖಂಡ
ಕಾವ್ಯಗಳನ್ನಲ್ಲದೆ ನವಾಂಕುಶ, ಸ್ಮೃತಿಮುಕ್ತಕವೇ ಮೊದಲಾದ ಕೃತಿಗಳನ್ನು
ರಚಿಸಿದ್ದ ಉದ್ದಂಡ ಕವಿ ಅಸಾಧಾರಣ ಶ್ರೇಣಿಯ ಆಶುಧಾರಾನಿಪುಣ.

ಒಮ್ಮೆ ಉದ್ದಂಡನು 'ಊರಕಂ' ಎಂಬ ಸ್ಥಳದಲ್ಲಿದ್ದ ಪಾರ್ವತೀದೇ-
(ವಲಯಾಧೀಶ್ವರಿಯೆಂದು ಸ್ಥಾನಿಕನಾಮ)ಯ ದೇಗುಲಕ್ಕೆ ಹೋದನು.
ದೂರದಿಂದ ಪ್ರಯಾಣಿಸಿ ಬಂದ ಕಾರಣ ಕವಿಗೆ ಬಹಳ ಬಹಳ ಬಳಲಿಕೆಯಾ
ಗಿತ್ತು. ದೇವಾಲಯದಲ್ಲಿ ಹಸಿವನ್ನು ಹಿಂಗಿಸಿಕೊಳ್ಳಲು ಏನಾದರೂ ಸಿಗುವುದೆ
ಎಂದು ಪರಿಶೀಲಿಸಿದರೂ ಆ ಹೊತ್ತಿಗಾಗಲೇ ನಿತ್ಯದ ಅನ್ನಸಮಾರಾಧನೆ
ಮುಗಿದು ಪಾಕಶಾಲೆ ಬರಿದಾಗಿತ್ತು. ಆಗ ಶ್ರಾಂತಿ, ಅಶಾಂತಿಗಳಿಂದ
ಕನಲಿದ ಕವಿಯು ಮೇಲಣ ಉಪಜಾತಿವೃತ್ತದ ಪದ್ಯವನ್ನು ದೇವಿಗೆ ಗೇಲಿ
ಮಾಡುವವನಂತೆ ಹೇಳಿದನಂತೆ.

"ದೇವಿ ! ನಿನ್ನ ಗಂಡ ತಲೆಯೋಡನ್ನು ಭಿಕ್ಷೆಗಾಗಿ ಹಿಡಿದಿರುವ ಕಪಾಲಿ ! ನಿನ್ನ ತಂದೆ ಅತ್ಯಂತ ಕಠಿನ ಶಿಲಾಮಯಮೂರ್ತಿ ! ನಿನ್ನ ತಾಯಿ ಹೆಸರೇ ಸೂಚಿಸುವಂತೆ 'ಮೇನಾ' (ಅಂದರೆ 'ನನಗೆ ಏನೂ ಇಲ್ಲ' ಎಂದೂ ಅರ್ಥ ಬರುತ್ತದೆ ; ಇದು ಮೇನಾದೇವಿಯ ಅಂಕಿತನಾಮವೂ ಹೌದು), ಅಲ್ಲದೆ ನೀನೂ ಸಹ 'ವಲಯಾಲಯ'ದಲ್ಲಿರುವವಳು ! (ವಲಯಾಲಯ ಎಂಬುದು ಕ್ಷೇತ್ರನಾಮ ಹಾಗೂ ಕೆಟ್ಟ-ಹಾಳುಬಿದ್ದ ಮನೆ ಎಂದೂ ಅರ್ಥ !) ಹೀಗಿರು ವಾಗ ನನಗೆ ಹೇಗೆತಾನೆ ಅನ್ನ ಹಾಕೀಯೆ ? ನಾನು ಹೇಗೆ ತಾನೆ ನಿನ್ನಿಂದ ಅನ್ನದಾನಗಳನ್ನಪೇಕ್ಷಿಸುವುದು ?"

ಪ್ರಾಚೀನ ಭಾರತ ಕವಿಗಳು ದೇವತೆಗಳನ್ನೂ ವಿನೋದಕ್ಕೆ ಗೇಲಿ ಮಾಡ ಬಲ್ಲವರಾಗಿದ್ದರೆಂಬುದಕ್ಕೆ ಇದಕ್ಕಿಂತಲೂ ಹೃದ್ಯೋದಾಹರಣೆ ಬೇಕೇ ? ಅನ್ನ ಕೋಶವು ತುಂಬದಿದ್ದರೂ ಆನಂದಕೋಶವನ್ನು ತುಂಬಿಸುವಂಥ ಇಂಥ ಚಾಟು ಗಳೇ ಸರಸಸಾಹಿತೀಬೇಟೆಗಳು.

—೩೫—

ವೀಣಾಲಸನ್ಮಣಿಬಿಲಾಯ ನಮೋಽಸ್ತು ತಸ್ಮೈ
ವೀಣಾಫ್ಯಣಾಜನವತೇ ತ್ರಿಣೇತ್ರಿಣಾಯ ।
ಅರ್ಧೋಽಯಮೀಶ್ವರ ನಮಸ್ಕೃತಯೇ ಕಥಂ ಸ್ಯಾ-
ದಸ್ಯೋತ್ತರೋಕ್ತಿ ಮವಿದನ್ನಪಿ ಕೀದೃಶಃ ಸ್ಯಾತ್ ॥

ಉದ್ದಂಡ ಶಾಸ್ತ್ರಿಗೂ ಕೇರಳೀಯರಾದ ನಂಬೂದಿರಿಗಳಿಗೂ ಆಗಿಂದಾಗ್ಗೆ ವಾಗ್ಯುದ್ಧಗಳೂ, ಮಾತಿನ ಚಕಮಕಿಯೂ ನಡೆಯುತ್ತಲೇ ಇದ್ದಿತು. ಇಂಥ ಸಂದರ್ಭಗಳಲ್ಲಿ ಒಮ್ಮೆ ಇವನು, ಮತ್ತೊಮ್ಮೆ ಅವರು ; ಹೀಗೆ ವಿಜಯದಲ್ಲಿ ತೂಗಾಟ, ಮೇಲ್ಗೈಯಲ್ಲಿ ಜೊಯ್ದಾಟ ಸಾಗುತ್ತಲೇ ಇದ್ದಿತು.

ಒಮ್ಮೆ ತ್ರಿಚೂರಿನಲ್ಲಿಯೋ, ತಳಿಯಲ್ಲಿಯೋ ಇರುವ ಶಿವದೇವಾಲಯಕ್ಕೆ ಹೋಗಿದ್ದ ಉದ್ದಂಡನು ವಿಲಕ್ಷಣರೀತಿಯ ಶ್ಲಿಷ್ಟಪದಪ್ಲಾವಿತವಾದ ಮೇಲಣ ಪದ್ಯದ ಎರಡು ಸಾಲುಗಳನ್ನು ಹೇಳಿದ.

"ವೀಣೆಯನ್ನು ಹಿಡಿದ ಮಣಿಕಟ್ಟನ್ನುಳ್ಳವನೂ, ಬದಿರಿನ ಕಾಂತಿಯಿಂದ ಕಂಗೊಳಿಸುವ (ಸಿಂಹ-ಶಾರ್ದೂಲ) ಚರ್ಮಾಂಬರನೂ, ನಂದಿವಾಹನನೂ ಆದ ಶಿವನಿಗೆ ನಮಸ್ಕಾರ" (ದಕ್ಷಿಣಾಮೂರ್ತಿ ವೀಣಾಧಾರಿಯೆಂದು ಪ್ರಸಿದ್ಧಿ). ಬಳಿಕ ಮೂರನೆಯ ಸಾಲನ್ನು ಗುಂಫನವಾಗಿ ಹೇಳಿದ.

"ಅರ್ಧಪದ್ಯವಾದ ಇದು ಹೇಗೆ ತಾನೆ ಶಿವನಿಗೆ ಸ್ತೋತ್ರವಾಗಿ ಸಲ್ಲುವುದು ?" ಈ ರೀತಿ ಹೇಳಿದ ಉದ್ದಂಡನ ಆಶಯವು ಆ ದೇಗುಲದಲ್ಲಿ ಅಕಸ್ಮಾತ್ತಾಗಿ ಸೇರಿದ್ದ ನಂಬೂದಿರಿ ವಿದ್ವತ್ತಿಗಳು ತನ್ನ ಸಮಸ್ಯಾಪ್ರಾಯವಾದ ಈ ಪದ್ಯವನ್ನು ನಾಲ್ಕನೆಯ ಸಾಲನ್ನು ಕೊಡುವುದರ ಮೂಲಕ ಪೂರೈಸಲಿ, ಇಲ್ಲವೇ ಸೋತು ನತಮಸ್ತಕರಾಗಲೆಂದೇ ಇದ್ದಿತು.

ಆಗ ಅಲ್ಲಿದ್ದ ಭಾಷಾರಾಮಾಯಣಚಂಪೂಕಾರನಾದ ಪುನಂ ನಂಬೂದಿರಿಯು ಕೂಡಲೇ ನಾಲ್ಕನೆಯ ಸಾಲನ್ನು ಹೇಳಿದ.

"ಈ ಸಂದೇಹಕ್ಕೆ ಸಮಾಧಾನವನ್ನು ತಿಳಿಯದವನು ಹೇಳಿದ್ದಾನು ?" ಉದ್ದಂಡನ ಪ್ರಶ್ನೆಗೆ ಉತ್ತರವಾಗಿ ಬಂದ ಪುನಂನ ಪ್ರಶ್ನೆ ತುಂಬ ಸೊಗಸಾಗಿದೆ. ಈ ಸಾಲು 'ಈ ಮಾತ್ರದ ಪದ್ಯವನ್ನು ಪೂರ್ತಿ ರಚಿಸಲಾಗದ ಉದ್ದಂಡನೆಂಥ ದಡ್ಡನೋ !' ಎಂದು ಧ್ವನಿಸುವುದಲ್ಲದೆ ಹೀಗೆ ಅಸಮರ್ಥನೆನಿಸಿದವನು 'ನಿಷ್ಪ್ರ'ನೇ ಆಗಬೇಕು (ಮುಪಿಸಬೇಕು) ಎಂದೂ ಸೂಚಿಸುತ್ತದೆ. ಅದಲ್ಲದೆ ಉದ್ದಂಡನು ತನ್ನ ಎರಡು ಸಾಲಿನಲ್ಲಿ ಆರುಬಾರಿ 'ನಕಾರ'ವನ್ನು ಬಳಸಿದ್ದ. ಈ ಬಗೆಯ 'ನ' ಕಾರಗಳ ಅಧಿಕಪ್ರಸಂಗದಿಂದ ಪದ್ಯ ಕ್ಲಿಷ್ಟವಾಗಿದ್ದಲ್ಲದೆ ಸರಸವಾಗಿಲ್ಲ. ಆದುದರಿಂದ 'ನಿ-ಷಟ್-ನ' ಆರು 'ನ-ಕಾರ'ಗಳನ್ನು ಬಿಟ್ಟಿದ್ದಕ್ಕೆ ಚೆನ್ನಾಗಿರುತ್ತಿತ್ತೆಂದೂ ಇಂಗಿತವಿದೆ ! ಇಂಥ ಪ್ರತ್ಯುತ್ಪನ್ನ ಚಮತ್ಕೃತಿಗಳಿಗೆ ಸಂಸ್ಕೃತದಲ್ಲಿ ಬರವೇ ಇಲ್ಲ.

—೩೬—

ವಾಚಾ ವಾಕ್ಯಪದಪ್ರಮಾಣಪದವೀಸಂಚಾರಸಂಪೂತಯಾ
ಸನ್ನದ್ಧಪ್ರತಿಮಲ್ಲಗಲ್ಲಮುಕುಟೀಕುಟ್ಟಾಕಧಾಟೀಜುಷಾ ।
ಸಾಟೋಪಂ ವಿಹರನ್ ಕಥಂ ನು ರಮಸೇ ಸಾಹಿತ್ಯಮುದ್ರಾರಸೇ
ಪ್ರೌಢಸ್ತ್ರೀರಸಿಕಾಯ ಬಾಲವನಿತಾಸಂಗಃ ಕಥಂ ರೋಚತೇ ?

ಉದ್ದಂಡನ ವಿದ್ಯಾವೈಭವವನ್ನು ಕುರಿತ ಹಲವು ಕಥೆಗಳಲ್ಲಿದೂ ಒಂದು.

ಒಮ್ಮೆ ಉದ್ದಂಡನು ಕುತಲ್ಲೂರೆಂಬ ನಂಬೂದಿರಿಗಳ 'ಇಲ್ಲಂ' (ಬೃಹತ್ತಾದ ಒಟ್ಟುಕುಟುಂಬದ ಮನೆ)ಗೆ ಹೋದಾಗ ಆ ಗೃಹದ ಅಗ್ರಣಿಯಾದ ವೃದ್ಧವಿದ್ವಾಂಸನು ಎದುರ್ಗೊಂಡು ಕವಿಯನ್ನು ಆದರಿಸಿದ. ಹಲವಾರು ತಲೆಮಾರುಗಳಿಂದ ವ್ಯಾಕರಣವನ್ನು ಚೆನ್ನಾಗಿ ಕಲಿತು ತಮ್ಮ ವಂಶಕ್ಕೇ ಪಾಣಿನೀಯವು ಮೀಸಲೆಂದುಕೊಂಡಿದ್ದ ಆ ಮನೆಯವರ ಪ್ರತಿನಿಧಿಯಾದ ವೃದ್ಧನಂಬೂದಿರಿ ಪ್ರಾಸ್ತಾವಿಕವಾಗಿ ಉದ್ದಂಡಶಾಸ್ತ್ರಿಯನ್ನು "ನೀನು 'ಪದಮಂಜರಿ'ಯನ್ನು ಓದಿರುವೆಯಾ" ಎಂದು ಪ್ರಶ್ನಿಸಿದ. ಕೂಡಲೇ ಉದ್ದಂಡನು ಲಿಪಿಕಾರನನ್ನೊಬ್ಬನನ್ನು ಕರೆಯಿಸಿ ಆತನಿಗೆ ಅಲ್ಲಿಯೇ ಇಡಿಯ ಪದಮಂಜರಿಯನ್ನು ಉಕ್ತಲೇಖನವನ್ನಾಗಿ ಹೇಳಲು ತೊಡಗಿದನಂತೆ. ಆಗ ಉದ್ದಂಡನ ಉದ್ದಾಮತೆಯನ್ನರಿತ ನಂಬೂದಿರಿ ಕ್ಷಮೆ ಕೇಳಿ, ಬಳಿಕ ತಮ್ಮ ಮನೆಯಲ್ಲಿಯೇ ಹಲವು ಕಾಲವಿದ್ದು ಪ್ರೌಢವ್ಯಾಕರಣ ಪಾಠಗಳನ್ನು ಹೇಳುವೆಯಾ ಎಂದು ಕೇಳಲು ಕವಿಯು ಮೇಲಣ ಪದ್ಯವನ್ನು ನುಡಿದನಂತೆ.

---

ಟಿಪ್ಪಣಿ: — 'ಪದಮಂಜರೀ' ಎಂಬುದು ವಾಮನ-ಜಯಾದಿತ್ಯರು ರಚಿಸಿದ 'ಕಾಶಿಕಾ' ಎಂಬ ವ್ಯಾಕರಣಗ್ರಂಥದ ವ್ಯಾಖ್ಯಾನ. ಇದರ ಕರ್ತೃ ಹರದತ್ತ. ಪದಮಂಜರಿಯ ಪ್ರೌಢಿಯನ್ನು ಮಹಾಭಾಷ್ಯದೊಂದಿಗೆ ಹೋಲಿಸುವುದುಂಟು. ಇದರ ಬಗೆಗೆ ಜನಶ್ರುತಿಯೇ ಇದೆ.

ಅನಧೀತೇ ಮಹಾಭಾಷ್ಯೇ ವ್ಯರ್ಥಾ ಸಾ ಪದಮಂಜರೀ ।
ಅಧೀತೇಽಪಿ ಮಹಾಭಾಷ್ಯೇ ವ್ಯರ್ಥಾ ಸಾ ಪದಮಂಜರೀ ॥

"ಎದುರಾಳಿಗಳ ಶೃಂಗಭಂಗಮಾಡಬಲ್ಲ ಪ್ರಚಂಡವಾದ ವಾಕ್ ಶಕ್ತಿಯಿಂದ ಪದ-ವಾಕ್ಯ-ಪ್ರಮಾಣಾದಿ ಸಕಲಶಾಸ್ತ್ರಗಳಲ್ಲಿಯೂ ಲೀಲಾಜಾಲವಾಗಿ ವಿಹರಿಸಿ ವಾದಮಾಡಲು ಉತ್ಸಾಹವಿರುವ ನನಗೆ ಬರಿಯ ಬಾಲ ವ್ಯಾಕರಣ ಸಾಹಿತ್ಯಪಾಠಗಳಲ್ಲಿ ಸುಖವೇ ? ಪ್ರೌಢಸ್ತ್ರೀರಸಿಕನಿಗೆ ಎಳೆಹುಡುಗಿ ತಕ್ಕ ಜೋಡಿಯೇ" ಹೀಗೆ ಆ ವೃದ್ಧನ ಪ್ರಾರ್ಥನೆಯನ್ನು ನಿರಾಕರಿಸಿದನಂತೆ.

—೩೭—

ಸಂಭಾರತಪೂರಿಕೃಪಯಾಂಬ ಶುಭಮಂಗಂ
  ಶುಂಭತು ಚಿರಂತನಮಿದಂ ತವ ಮದಂತಃ ।
ಜೃಂಭರಿಪುಕುಂಭವರಕುಂಭಯುಗಡಂಭ-
  -ಸ್ತಂಭಕುಚಕುಂಭಪರಿರಂಭಪರಶಂಭು ॥

ಉದ್ದಂಡಶಾಸ್ತ್ರಿಯು ಪದವಾಕ್ಯಪ್ರಮಾಣಗಳನ್ನೂ, ವೇದ–ವೇದಾಂಗ, ವೇದಾಂತಗಳನ್ನೂ ಬಲ್ಲವನಲ್ಲದೆ ಆರು ಭಾಷೆಗಳಲ್ಲಿ ಅನರ್ಗಳವಾಗಿ ಕವನಿಸಬಲ್ಲವನಾಗಿ ಗೀತ, ನೃತ್ತ, ವಾದಿತ್ರಗಳಲ್ಲಿಯೂ ನುರಿತಿದ್ದ. ಅಲ್ಲದೆ ಲೋಕಸ್ವಭಾವವನ್ನು ಚೆನ್ನಾಗಿ ತಿಳಿದಿದ್ದ ವಾಗ್ಮಿ ಮತ್ತು ಸಮಯೋಚಿತ ಕಾರ್ಯಸಾರ್ವಭೌಮ. ಹೀಗಾಗಿ ಆತನಿಗೆ ತನ್ನಲ್ಲಿ ಅಪಾರ ಹೆಮ್ಮೆ ತುಂಬಿತ್ತು.

ಒಮ್ಮೆ ಮುಕ್ಕೋಣದಲ್ಲಿ ಕಾತ್ಯಾಯನಿಯನ್ನು ಆರಾಧಿಸುತ್ತಾ, ಉದ್ದಂಡನು ಮೇಲಣ 'ಇಂದುನಂದನವೃತ್ತ'ದ ಪದ್ಯದ ಪೂರ್ವಾರ್ಧವನ್ನು ಹೇಳಿದನಂತೆ ;

"ತಾಯಿ ! ನಿನ್ನ ಅಪಾರಕೃಪೆಯಿಂದ ತುಂಬಿಕೊಂಡು, ಮಾಂಗಲಿಕವಾದ ನಿನ್ನ ಸ್ವರೂಪವನ್ನು ಸದಾಕಾಲವೂ ನನ್ನ ಅಂತರಂಗವು ಹೊಂದಿ ಶೋಭಿಸಲಿ".

ಅನುಪ್ರಾಸದ ಅಲಂಕಾರದಿಂದ, ಲಯಾನ್ವಿತಗತಿಯಿಂದ ಕೂಡಿದ ಈ ವಿಲಕ್ಷಣ ಪದ್ಯದ ಉತ್ತರಾರ್ಧವನ್ನು ಹೇಳಲು ಕವಿ ಕೊಂಚಕಾಲ ತಡೆದನಂತೆ.

ಆ ಕೂಡಲೇ ಹಿಂದಿನಿಂದ ಯಾರದೋ ಧ್ವನಿ ಕೇಳಿಸಿತು, ಅದು ಉತ್ತರಾರ್ಧವನ್ನು ಉದ್ದಂಡನ ಶೈಲಿಯಲ್ಲಿಯೇ ಅನುಪಮವಾಗಿ ಪೂರೈಸಿತು.

"ಇಂದ್ರನ ಪಟ್ಟದಾನೆಯ ಕುಂಭಸ್ಥಳಗಳ ಗರ್ವವನ್ನು ಕಳೆಯುವಂಥ ನಿನ್ನ ಕುಚಕುಂಭಗಳನ್ನು ತಬ್ಬಿರುವ ಶಿವನನ್ನು ಹೋದಿರುವ (ನಿನ್ನ ಸ್ವರೂಪವನ್ನು)..."

ಉದ್ದಂಡನು ಬೆರಗಾಗಿ ಹಿಂದೆ ನೋಡಿ ಪೂರೈಸಿದವರಾರೆಂದು ಕೇಳಿದಾಗ "ದೇವಿಯ ದಾಸ" ಎಂಬ ವಿನಯದ ಉತ್ತರ ದೊರೆತಿತ್ತು! ವಾಸ್ತವವಾಗಿ ಆ ವಿನಯಶಾಲಿ ಅನಯಟ್ಟು ಕರುಣಾಕರ ಪಿಷಾರೊಟಿ ಎಂಬ ಹೆಸರಿನ ಛಂದೋಲಂಕಾರವ್ಯಾಕರಣ ನಿಧಿಯಾದ ಕವಿವರ. ಆ ಬಳಿಕ ಉದ್ದಂಡಶಾಸ್ತ್ರಿ ಕರುಣಾಕರನನ್ನು ಗೌರವಿಸಿ ತಾನೂ ವಿನಯಿಯಾದನು.

—೩೮—

ಚತುರಂ ತುರಗಂ ಪರಿವರ್ತಯಸೇ ಪಥಿಪೌರಜನಾನ್ಪರಿಮರ್ದಯಸೇ ।
ನ ಹಿ ತೇ ಭುಜಭಾಗ್ಯಭವೋ ವಿಭವೋ ಭಗಿನೀಭಗಭಾಗ್ಯಭವೋ ವಿಭವಃ ॥

ಉದ್ದಂಡಶಾಸ್ತ್ರಿಯು ಬರಿಯ ಶಾಸ್ತ್ರ-ಕಾವ್ಯಗಳಲ್ಲಿ ಮಾತ್ರ ಉದ್ದಂಡನಾಗಿರಲಿಲ್ಲ, ಅಂಜದ, ನಂಜಿಲ್ಲದ, ಮೊನಚಾದ ಸತ್ಯವನ್ನು ಎಂಥ ಬಲವಂತರೆದುರಿಗೂ ಹೇಳಿ ಸಾರ್ವಜನಿಕವಾಗಿ ಅನ್ಯಾಯವನ್ನು ಎದುರಿಸಬಲ್ಲ ಧೀರನೂ ಆಗಿದ್ದ.

ಒಮ್ಮೆ ಆತನ ಪ್ರಯಾಣಗಳಲ್ಲಿ ತಟಸ್ಥಿಸಿದ ಒಂದು ಸಂಸ್ಥಾನದಲ್ಲಿ ಅದರ ಅಧಿಪತಿಯ ಭೋಗಪತ್ನಿಯಂತಿದ್ದ ವೇಶ್ಯೆಯೊಬ್ಬಳ ತಮ್ಮ ಆ ಊರಿನಲ್ಲೆಲ್ಲ

ಹೆಸರು ಹೊತ್ತ ಷಂಡನಾಗಿದ್ದ. ಉದ್ದಂಡನು ಆ ಊರಿನೊಡೆಯನ ಸಂಮಾನ ಹೊಂದಿ ಒಂದೆರಡು ದಿನಗಳಲ್ಲಿಯೇ ಅಲ್ಲಿಯ ಪ್ರಧಾನ ವಿದ್ಯಮಾನಗಳನ್ನರಿತು ಕೊಂಡ. ಬಳಿಕ ಸಂಜೆಯಂದು ಉದ್ದಂಡನು ಪೇಟೆಬೀದಿಗಳಲ್ಲಿ ತಿರುಗು ತ್ತಿರಲು ಆ ವೇಶ್ಯೆಯ ಸೋದರ ಜರ್ಬಿನಿಂದ ವಾತ್ಯಶ್ವವೊಂದನ್ನೇರಿ ಹಾದಿ ಹೋಕರನ್ನೆಲ್ಲ ಹೆದರಿಸುತ್ತಾ, ತನ್ನ ಕುದುರೆಯನ್ನು ಮುಗ್ಗರಮೇಲೆ ಏರಿಸುತ್ತಾ ಪರಿಪರಿಯ ಹಿಂಸೆಯನ್ನು ಮಾಡುತ್ತಾ ಅಟ್ಟಹಾಸದಿಂದ ಎದುರಾದ. ಇದನ್ನು ಕಂಡು ಕೆರಳಿದ ಕವಿ ಕೂಡಲೇ ಕುದುರೆಯ ಲಗಾಮು ಹಿಡಿದು, ತಡೆದು ಉಚ್ಚೈಸ್ಸ್ವರದಿಂದ ಮೇಲಣ ತೋಟಕವೃತ್ತದ ಪದ್ಯವನ್ನು ಆಶುವಾಗಿ ಪಠಿಸಿದ.

"ಒಳ್ಳೆಯ ಕುದುರೆಯನ್ನು ಸವಾರಿಮಾಡುತ್ತಿದ್ದೀಯೆ! ಬೀದಿಯ ಜಾಗಗಳನ್ನೆಲ್ಲ ತುಳಿದಾಡುತ್ತಿದ್ದೀಯೆ! ಆದರೆ ಈ (ಕುದುರೆ-ವೇಷ-ಭೂಷೆ) ಸಂಪತ್ತಿಗಳೆಲ್ಲ ನಿನ್ನ ದೇವರುಸುರಿಸಿದ ತೋಳ್ಬಲದ ಸಂಪಾದನೆಯಲ್ಲ, ಇವೆಲ್ಲವೂ ನಿನ್ನ ಅಕ್ಕನು ತನ್ನ ಮೈಮಾರಿ ಸಂಪಾದಿಸಿದ ಸೊತ್ತು." (ಮೂಲದಲ್ಲಿ ಇನ್ನೂ ಮೊನಚಾಗಿದೆ—ಈ ವ್ಯಂಗ್ಯ.)

ಈ ಧಿಕ್ಕಾರನೆಯನ್ನು ಕೇಳಿ ಸಾರ್ವಜನಿಕವಾಗಿ ಅವಮಾನಿತನಾದ ಆ ಷಂಡ ನಾಚಿ ಬುದ್ಧಿ ತಂದುಕೊಂಡನಂತೆ.

—೨೯—

ಶ್ರೀಕೃಷ್ಣಕ್ಷಿತಿಪಾಲರತ್ನಮಣಿಭಿರ್ದತ್ತೈರ್ವಿನಾಂ ಗೃಹಾ
ನಾನಾರತ್ನವಿಚಿತ್ರಕುಟ್ಟಿಮಭುವೋ ರತ್ನಾಕರತ್ವಂ ಗತಾಃ ।
ಅಬ್ಧಿಃ ಕೇವಲವಾರಿಪೂರನಿಲಯಸ್ತಂಘಾತ್ಮಕೇ ಸಪ್ತನೈ
ರಂಧ್ರೋಧಿರ್ಜಲಧಿಃ ಪಯೋಧಿರುದಧಿರ್ವಾರಾನಿಧಿರ್ವಾರಿಧಿಃ ॥

ದೊಡ್ಡ ಲಕ್ಷ್ಮೀಧರ ಪಂಡಿತನು ಶ್ರೀಕೃಷ್ಣದೇವರಾಯನ ಕಾಲದಲ್ಲಿದ್ದ ಮಹಾವಿದ್ವಾಂಸ ಮತ್ತು ಪ್ರೌಢಕವಿ. 'ಸೌಂದರ್ಯಲಹರೀ'ಗೆ ಈತನು ರಚಿಸಿದ

ವ್ಯಾಖ್ಯಾನ ಇಂದಿಗೂ ವಿಖ್ಯಾತ. ಇವನ ಆತ್ಮವಿಶ್ವಾಸದ್ಯೋತಕವಾದ ಸ್ವಪ್ರಶಂಸೆಗಳಂತೂ ಬಹಳ ಅಬ್ಬರದಿಂದ ಕೂಡಿ ಆ ಕಾಲದ ಜಿಗೀಷಾ ಪಾಂಡಿತ್ಯದ ಧೋರಣೆಗಳನ್ನು ಚೆನ್ನಾಗಿ ತೋರಿಸುತ್ತವೆ. ಈತನನ್ನೊಮ್ಮೆ ಭುವನವಿಜಯಸಭೆಯಲ್ಲಿ ಸುಪ್ರಸಿದ್ಧವಾದ 'ಅಂಭೋಧಿರ್ಜಲಧಿಃ ಪಯೋಧಿ-ರುದಧಿರ್ವಾರಾಂನಿಧಿರ್ವಾರಿಧಿಃ' ಎಂಬ ಸಮಸ್ಯೆಯನ್ನು* ಭಂಗ್ಯಂತರದಿಂದ ಪರಿಹರಿಸಲು ಕೇಳಲಾಯಿತು. ಆಗ ದೊಲ್ಲ ಲಕ್ಷ್ಮೀಧರನು ಆಶುವಾಗಿ ಮೇಲಿನ ಪರಿಹಾರಪದ್ಯವನ್ನು ಹೇಳಿದ.

"ಶ್ರೀಕೃಷ್ಣದೇವರಾಯನು ಬಹೂಕರಿಸಿದ ರತ್ನಗಳಿಂದ, ಮುತ್ತು-ಮಾಣಿಕ್ಯಗಳಿಂದ ವಿದ್ವತ್ಕವಿಗಳ ಮನೆಗಳ ಗೋಡೆ-ನೆಲಗಳೂ ರತ್ನಾಕರಗಳಾಗಿ ಹೋದವು. ಆದುದರಿಂದ ನಿಜವಾಗಿಯೂ ರತ್ನಾಕರ ಎಂಬ ಹೆಸರು ಪಡೆದ ಸಮುದ್ರವು ಕೇವಲ ಜಲಾಕರವಷ್ಟೇ. ಅಂತೆಯೇ ಸಜ್ಜನರೀಗ ಅದನ್ನು ಅಂಭೋಧಿ, ಜಲಧಿ, ಪಯೋಧಿ, ಉದಧಿ, ವಾರಿಧಿ, ವಾರಾಂನಿಧಿಯೆಂದು ನೀರಿನತಾಣವೆಂಬ ಪರ್ಯಾಯ ಪದಗಳಿಂದ ಕರೆಯುತ್ತಿದ್ದಾರೆ!"

ಪರೋಕ್ಷವಾಗಿ ಶ್ರೀಕೃಷ್ಣದೇವರಾಯನ ದಾತೃತ್ವವನ್ನು ಕೀರ್ತಿಸುವ ಈ ಪರಿಹಾರ ರಾಜನಿಗೆ ನಿಜಕ್ಕೂ ಹರ್ಷ ತಂದಿರಬೇಕು!

---

* ಇದು ಭೋಜಪ್ರಬಂಧದಲ್ಲಿಯು ಕೆಲವು ಆವೃತ್ತಿಗಳಲ್ಲಿ ಕಂಡುಬರುವ ಸಮಸ್ಯೆ. ಇಲ್ಲಿಯ ಪರಿಹಾರವಿಂತಿದೆ :

'ಅಂಬಾ ಕುಪ್ಯತಿ ತಾತ ! ಮೂರ್ಧ್ನಿ ವಿಧೃತಾ ಗಂಗೇಯಮುತ್ಸೃಜ್ಯತಾಂ'<br>
'ವಿದ್ವನ್ ! ಷಣ್ಮುಖ ! ಸಂತತಂ ಮಯಿ ರತಾ ದೇವ್ಯಾಃ ಗತಿಃ ಕಾ ವದ'<br>
ಕೋಪಾವೇಶವಶಾದ್ವಿರುದ್ಧವದನಃ ಪ್ರತ್ಯುತ್ತರಂ ದತ್ತವಾನ್<br>
'ಅಂಭೋಧಿರ್ಜಲಧಿಃ ಪಯೋಧಿರುದಧಿರ್ವಾರಾಂನಿಧಿರ್ವಾರಿಧಿಃ' ॥

## -೪೦-

ಆಂಧ್ರಭಾಷಾಮಯಂ ಕಾವ್ಯಂ ಅಯೋಮಯವಿಭೂಷಣಂ ।
ಸಂಸ್ಕೃತಾರಣ್ಯಸಂಚಾರಿವಿದ್ವನ್ಮಾತಂಗಶೃಂಖಲಂ ॥

ಸಾಹಿತೀಸಮರಾಂಗಣ ಸಾರ್ವಭೌಮನೆಂದು ಹೆಸರಾದ ಶ್ರೀಕೃಷ್ಣದೇವ ರಾಯನ ಭುವನವಿಜಯವೆಂಬ ಕವಿಪಂಡಿತಸಭಾಭವನಕ್ಕೆ ಭೂಷಣವಾಗಿ ಇದ್ದ ಅಷ್ಟದಿಗ್ಗಜಕವಿಗಳಲ್ಲಿ ಪ್ರಥಮನೆನಿಸಿದವನು ಅಲ್ಲಸಾನಿಪೆದ್ದನ. ಈತನು ಆಗಿನ ಎಲ್ಲ ಭಾಷೆಗಳ ಪ್ರೌಢಕವಿಗಳಂತೆಯೇ ಮಾತೃಭಾಷೆಯಲ್ಲಿಯೂ ಸಂಸ್ಕೃತದಲ್ಲಿಯೂ ಸಮಾನಪಾಂಡಿತ್ಯವನ್ನು ಪಡೆದಿದ್ದ. ಸಂಸ್ಕೃತಾಂಧ್ರಗಳಲ್ಲಿ ಉಭಯಭಾಷಾಕವಿತ್ವ ಈತನ ಸೊತ್ತಾಗಿತ್ತು. ಹೀಗಿದ್ದೂ ತೆಲುಗಿನಲ್ಲಿ ಅಪಾರ ಪ್ರೀತಿಯುದ್ದುದರಿಂದ ಹಾಗೂ ಸಂಸ್ಕೃತದ ಅಲಂಕಾರಿಕ ಶೈಲಿಯನ್ನು ತನ್ನ ನುಡಿಯಲ್ಲಿ ಕಸಿಮಾಡಬೇಕೆಂಬ ಹೆಬ್ಬಯಕೆ ಇದ್ದುದರಿಂದ ಪ್ರಬಂಧವೆಂಬ ಹೊಸ ಕಾವ್ಯಪದ್ಧತಿಗೆ ಹರಿಕಾರನಾಗಿ ಆಂಧ್ರಕವಿತಾಪಿತಾಮಹನೆನಿಸಿದ.

ಒಮ್ಮೆ ಮದೋದ್ಧತನಾದ ಸಂಸ್ಕೃತಕವಿಯೊಬ್ಬ ಭುವನವಿಜಯ ಸಭೆಯಲ್ಲಿ ಮೇಲಣ ಶ್ಲೋಕದ ಪೂರ್ವಾರ್ಧವನ್ನು ಗೇಲಿಯಾಗಿ ಹೇಳಿದ ; "ತೆಲುಗಿನ ಕಾವ್ಯವು ಕಬ್ಬಿಣದ ಅಲಂಕಾರ" (ಇಲ್ಲಿ 'ಅಯೋಮಯ' ವೆಂದರೆ ಸಂಸ್ಕೃತದಲ್ಲಿ ಕಬ್ಬಿಣದಿಂದಾದದ್ದೆಂದೂ, ತೆಲುಗಿನಲ್ಲಿ ಗೊಂದಲವೆಂದೂ ಅರ್ಥವಿರುವುದರಿಂದ ಚಮತ್ಕಾರ ಹುಟ್ಟಿಗಿದೆ). ಕೂಡಲೇ ಆಂಧ್ರಾಭಿಮಾನದಿಂದ ಅಲ್ಲಸಾನಿಪೆದ್ದನನು ಉತ್ತರಾರ್ಧವನ್ನು ನುಡಿದ "ನಿಜವೇ ! ಅದು ಸಂಸ್ಕೃತಾರಣ್ಯದಲ್ಲಿ ಸಂಚರಿಸುವ ಪಂಡಿತಗಜಕ್ಕೆ ಸಂಕೋಲೆಯೇ ಸರಿ !" (ತೆಲುಗಿನ ಕಾವ್ಯಗಳು ಕೆಲವೊಮ್ಮೆ ಸಂಸ್ಕೃತಕಾವ್ಯಗಳಿಗಿಂತಲೂ ಸಂಸ್ಕೃತಮಯವಾಗಿ ಕಠಿಣವಾಗಿರುವುದುಂಟು ! ಅಲ್ಲದೆ ಅಚ್ಚತೆಲುಗು ಕಠಿನತರವೂ ಹೌದು.)

—೪೧—

ಭೀಮಸೇನಗದಾತ್ರಸ್ತಾ ದುರ್ಯೋಧನವರೂಥಿನೀ ।
ಶಿಖಾ ಖಲ್ವಾಟಕಸ್ಯೇವ ಕರ್ಣಮೂಲಮುಪಾಶ್ರಿತಾ ॥

ತಿರುನಾರಾಯಣ ಭಟ್ಟತಿರಿಯು ಕೇರಳದ ಮಹಾವಿದ್ವತ್ಕವಿಗಳಲ್ಲಿ ಅಗ್ರಗಣ್ಯ. ಅನೇಕ ಕಾವ್ಯ–ಶಾಸ್ತ್ರಗಳ ನಿರ್ಮಾಪಕನಾದ ಈತನ ಕೃತಿಗಳಲ್ಲಿ ನಾರಾಯಣೀಯಂ ಕಾವ್ಯವೂ, ಪ್ರಕ್ರಿಯಾಕೌಮುದಿಯೆಂಬ ವ್ಯಾಕರಣಗ್ರಂಥವೂ ಸುಪ್ರಸಿದ್ಧ. ಮಹಾಭಕ್ತನೂ, ಸರಳಜೀವಿಯೂ ಆಗಿದ್ದ ಈತನ ಬಾಹ್ಯ ರೀತಿ ನೀತಿಗಳನ್ನು ನೋಡಿ ಅನೇಕರು ಇವನನ್ನು ತೀರ ಸಾಮಾನ್ಯಮನುಷ್ಯನೆಂದು ಭ್ರಮಿಸುತ್ತಿದ್ದರಂತೆ.

ಒಮ್ಮೆ ಅಂಬಲಪ್ಪುಳದ ರಾಜ ದೇವನಾರಾಯಣನನ್ನು ಕಾಣಲು ಹೋದ ಭಟ್ಟತಿರಿಯನ್ನು ರಾಜನು ಸಾಮಾನ್ಯನೆಂದು ಭಾವಿಸಿ ಅಂದು ತನಗೆ ಪುರಾಣ ಶ್ರವಣಮಾಡಿಸಬೇಕೆಂದು ಕೋರುತ್ತಾ ಆತನಿಗೆ ಹಸ್ತಲಿಖಿತಪುರಾಣ ಗ್ರಂಥಗಳನ್ನು ಸರಿಯಾಗಿ ಓದಲು ಬರುವುದಷ್ಟೆ? ಎಂದು ಪ್ರಶ್ನಿಸಿದನಂತೆ. ('ಕೂಟ್ಟಿ ವಾಯಿಕ್ಕುಕ ವರುಮಾ ?' ಎಂಬುದು ರಾಜನ ಪ್ರಶ್ನೆ–ಕೂಡಿಸಿ ಕೊಂಡು ಸರಿಯಾಗಿ ಓದಲು ಬರುವುದೇ ? ಎಂದು ಇವರ ತಾತ್ಪರ್ಯ) ಭಟ್ಟತಿರಿಯು ತನ್ನ ವ್ಯಕ್ತಿತ್ವವನ್ನು ತೋರಗೊಡದೆಯೇ ಅಂಗೀಕರಿಸಿ ಆ ದಿನದ ಅಪರಾಹ್ಣದಲ್ಲಿ ಮಹಾಭಾರತದ ಕರ್ಣಪರ್ವವನ್ನು ವಾಚಿಸಿ ವ್ಯಾಖ್ಯಾನಿಸ ತೊಡಗಿದ. ಭೀಮನ ಪ್ರತಾಪವನ್ನು ವರ್ಣಿಸುವ ಘಟ್ಟದ ಶ್ಲೋಕಗಳನ್ನು ಪಠಿಸುತ್ತಾ ಮೇಲಣ ಸ್ವಕೀಯ ಆಶುರಚನೆಯನ್ನೂ ಸೇರಿಸಿಬಿಟ್ಟ.

"ಭೀಮಸೇನನ ಗದಾಘಾತದಿಂದ ಸೋರದ ದುರ್ಯೋಧನನ ಸೈನ್ಯವು ಬೊಕ್ಕತಲೆಯವನ ಕೂದಲಿನಂತೆ ಕಿವಿಯ ಬಳಿಗೆ (ಕರ್ಣನ ಬಳಿಗೆ) ಸರಿದು ಬಂದಿತು !"

ಈ ಬಗೆಯ ಶ್ಲೇಷಾಲಂಕಾರ ಚಮತ್ಕಾರವಿರುವ ಪದ್ಯವು ವ್ಯಾಸರದಲ್ಲವೆಂದು ಕೂಡಲೇ ಗ್ರಹಿಸಿದ ರಾಜನು 'ಇದಾರದು ?' ಎಂದು ಕೇಳಲು ಧೂರ್ಜಟಿಯು ನಗುತ್ತಾ "ಕೂಡಿಸಿಕೊಂಡು ಓದಲು ಬರುವುದೇ ಎಂದು (ಅಕ್ಷರಗಳನ್ನು ಕ್ರಮವಾಗಿ ಕೂಡಿಸಿಕೊಂಡು) ಕೇಳಿದಿರಲ್ಲಾ ! ಇದೋ ನೋಡಿ ಕೂಡಿಸಿಕೊಂಡು (ಸ್ವಂತ ಪದ್ಯಗಳನ್ನೂ ಪ್ರಕ್ಷೇಪಿಸಿಕೊಂಡು) ಓದುವುದೆಂದರೆ ಇದೇ ಅಲ್ಲವೇ !" ಎಂದನಂತೆ ! ಆಗ ದೇವನಾರಾಯಣನು ಈತನ ಪ್ರತಿಭಾ ಚಮತ್ಕಾರಗಳನ್ನರಿತು ಬಳಿಕ ಅವನಾರೆಂಬುದನ್ನು ತಿಳಿದು ಕ್ಷಮೆ ಕೋರಿ ಸತ್ಕರಿಸಿ ಆನಂದಿಸಿದನಂತೆ.

—೪೨—

ಆನಂದಕಾನನೇ ಕಾಶ್ಯಾಂ ತುಲಸೀ ಜಂಗಮಸ್ತರುಃ ।
ಕವಿತಾಮಂಜರೀ ಯಸ್ಯ ರಾಮಭ್ರಮರಚುಂಬಿತಾ ॥

ಶ್ರೀಮನ್ಮಧುಸೂದನಸರಸ್ವತೀ ಭಗವತ್ಪಾದರು ಕ್ರಿ.ಶ. 16-17 ನೆಯ ಶತಾಬ್ದದ ಆಸುಪಾಸಿನಲ್ಲಿದ್ದ ಮಹಾಮಹಿಮರು. ಕಾಶ್ಯಪಗೋತ್ರದಲ್ಲಿ ಗೌಡಕಾನ್ಯಕುಬ್ಜವಿಪ್ರವಂಶದಲ್ಲಿ ಹುಟ್ಟಿದ ಇವರ ಪೂರ್ವಾಶ್ರಮನಾಮ ಕಮಲನಯನ ಎಂದು. ಪುರಂದರ ಎಂಬ ಪಂಡಿತ ಇವರ ತಂದೆ. ಬಾಲ್ಯದಲ್ಲಿಯೇ ತಂದೆಯ ವಿದ್ವತ್ತಿಗೆ ಮಾಧವಪಾಶಾ ಎಂಬ ರಾಜನು ಗೌರವ ಕೊಡದಿದ್ದಾಗ ನಿರ್ವೇದದಿಂದ ಕಾಶಿಗೆ ಹೋಗಿ ಅಲ್ಲಿ ಶ್ರೀವಿಶ್ವೇಶ್ವರಸರಸ್ವತಿಗಳಿಂದ ಸಂನ್ಯಾಸ ಸ್ವೀಕರಿಸಿದರು. ಮುಂದೆ ಅಕ್ಬರನು ಹಿಂದೂ ವಿರೋಧತ್ವಕ್ಕೆ ಮನಸ್ಸು ಮಾಡಿದಾಗ ದಶನಾಮೀಸಂನ್ಯಾಸಿಗಳ ಪಡೆಕಟ್ಟಿ ಯುದ್ಧಕ್ಕೆ ಸಿದ್ಧರಾದರು. ಆಗ ಅಕ್ಬರ್ ವಿವೇಕವಂತ ಬಳಿಕ ಶ್ರೀಮಧುಸೂದನಸರಸ್ವತಿಗಳಿಗೆ ಘನಸಂಮಾನವು ಆಯಿತು.

ಇವರು ತರ್ಕದಲ್ಲಿ ನಿಸ್ಸೀಮರೆನಿಸಿ ಸರ್ವಕಾಲಕ್ಕೂ ತರ್ಕಶಾಸ್ತ್ರದ (ವಿಶೇಷತಃ ನವೀನನ್ಯಾಯದ) ಮೂರ್ಧನ್ಯರೆನಿಸಿದ ಗದಾಧರ, ಜಗದೀಶಾದಿ ಗಳಿಗೇ ವಾದದಲ್ಲಿ ಅಜಯ್ಯರಾಗಿದ್ದರೆಂದು ತಿಳಿದುಬರುತ್ತದೆ. ಅದ್ವೈತವನ್ನು ಅದ್ವಿತೀಯವಾಗಿ ಪ್ರತಿಪಾದಿಸಿ ಜ್ಞಾನಪಾರಮ್ಯವನ್ನು ಒಪ್ಪಿಯೂ ಮಹಾಭಕ್ತ ರಾಗಿ ಪರಮತಸಹಿಷ್ಣುವೆನಿಸಿದ್ದರು. ಇವರ ಔದಾರ್ಯವನ್ನರಿಯದೆಯೇ ಕೆಲವು ಕುಹಕಿಗಳು ಹಿಂದಿಯ ಮಹಾಕವಿ ಗೋಸ್ವಾಮಿ ತುಳಸೀದಾಸರ ರಾಮಚರಿತಮಾನಸಕ್ಕೆ ಮಸಿಬಳಿಯಲು ಅದನ್ನು ಇವರಲ್ಲಿ ತಂದು ಅಭಿಪ್ರಾಯ ಹೇಳುವಂತೆ ಕೇಳಿದರು. ಇವರು ತುಲಸೀದಾಸರನ್ನು ಭಕ್ತಿಪಂಥದ ಸಗುಣ ವಾದಿಗಳಾದುದರಿಂದ ಹೀಗಳೆಯುವರೆಂದು ಆ ಧೂರ್ತರ ಹಂಚಿಕೆ. ಆದರೆ ತುಲಸೀದಾಸರ ಅಂತರಂಗವನ್ನು ಬಲ್ಲ ಶ್ರೀಮಧುಸೂದನಸರಸ್ವತಿಗಳು ಆನಂದದಿಂದ ಹೇಳಿದ್ದು ಮೇಲಿನ ಶ್ಲೋಕವನ್ನು !

"ಕಾಶಿಯೆನ್ನುವ ಬೃಹದಾನಂದವನದಲ್ಲಿ ತುಲಸೀದಾಸರು ಓಡಾಡುವ ವೃಕ್ಷ (ಅಥವಾ ತುಲಸಿಯೇ ಓಡಾಡುವ ಸಸ್ಯ !) ಅವರ ಕವಿತಾಕುಸುಮಗುಚ್ಛವು ಸದಾಕಾಲ ಶ್ರೀರಾಮನೆಂಬ ದುಂಬಿಯಿಂದ ಚುಂಬಿತವಾಗಿದೆ."

ಇಂಥ ಮೃದುಲಮೇದುರ ಕವಿತಾಸ್ತುತಿಯನ್ನು ಕೇಳಿ ತುಲಸೀದಾಸರ ವೈರಿಗಳು ನಿರುಪಾಯರಾಗಿ ಹಿಂದಿರುಗಿದರು.

---

ಟಿಪ್ಪಣಿ :- ತುಲಸೀದಾಸರು ಸಗುಣಭಕ್ತಿಪಂಥಕ್ಕೆ ಸೇರಿದ್ದರೂ ಅವರಿಗೆ ಪರಮತಾಸ್ತ್ರರ, ಕೇವಲಾದ್ವೈತದಲ್ಲಿಯೇ ಇದ್ದಿತೆಂಬುದಕ್ಕೆ ರಾಮ ಚರಿತಮಾನಸದಲ್ಲಿಯೇ ಅನೇಕ ಸಾಕ್ಷ್ಯಗಳಿವೆ.

—೪೩—

ಅದ್ವೈತವೀಥೀಪಥಿಕೈರುಪಾಸ್ಯಾ।
ಸ್ವಾರಾಜ್ಯಸಿಂಹಾಸನಲಬ್ಧದೀಕ್ಷಾ। ।
ಹಠೇನ ಕೇನಾಪಿ ವಯಂ ಶಠೇನ
ದಾಸೀಕೃತಾ ಗೋಪವಧೂವಿಟೇನ ॥

ಮಹಾಮಹಿಮರಾದ ಶ್ರೀ ಮಧುಸೂದನಸರಸ್ವತಿಗಳು ಅದ್ವೈತ ವೇದಾಂತದ ನಿರ್ಗುಣತತ್ತ್ವಪ್ರತಿಪಾದಕರೂ, ಜ್ಞಾನಧುರಂಧರರೂ ಆಗಿದ್ದರೂ ಭಕ್ತಿಯನ್ನಾಗಲಿ ಸಗುಣೋಪಾಸನೆಯನ್ನಾಗಲಿ ನಿರಾಕರಿಸಿದವರಲ್ಲ. ವಸ್ತುತಃ ಅವರಂಥ ಮಹಾಭಕ್ತರೇ ವಿರಳ. ದ್ವೈತವೇದಾಂತದ ಮಹಾಗ್ರಂಥವೆನಿಸಿದ ಶ್ರೀವ್ಯಾಸತೀರ್ಥರ 'ನ್ಯಾಯಾಮೃತ'ವು ತನ್ನ ಪ್ರೌಢಿಯಿಂದ ಅದ್ವೈತಕ್ಕೆ ಅಳುಕನ್ನುಂಟುಮಾಡಲು ಅದನ್ನು ತಮ್ಮ 'ಅದ್ವೈತಸಿದ್ಧಿ'ಯೆಂಬ ಮಹಾಕೃತಿಯಿಂದ ಪ್ರತ್ಯಾಖ್ಯಾನಿಸಿದ ಘನತೆ ಮಧುಸೂದನ ಸರಸ್ವತಿಗಳದು. ಇಂದಿಗೂ ಅದ್ವೈತದ ವಾದಗ್ರಂಥಗಳಲ್ಲಿ ಪರಮೋನ್ನತವೂ, ತರ್ಕದ ಚರಮಸೀಮೆಯನ್ನು ಮುಟ್ಟಿದುದೂ ಅದ್ವೈತಸಿದ್ಧಿಯೇ !

ಇಂಥ ಅದ್ವೈತಸಿದ್ಧಿಗ್ರಂಥದಲ್ಲಿ ನಿರ್ಗುಣ–ನಿರಾಕಾರ ಪರಬ್ರಹ್ಮತತ್ತ್ವವನ್ನು ಪ್ರತಿಪಾದಿಸಿ ಅಂತ್ಯದಲ್ಲಿ–ಕೊಳಲು ಹಿಡಿದು, ನೀಲನೀರದಕಾಂತಿಯಿಂದ ಪೀತಾಂಬರಧಾರಿಯಾಗಿ, ಮುಗ್ಧವಾದ ಬೆಳ್ದಿಂಗಳ ನಗೆ ಬೀರುವ ಕೃಷ್ಣನಿಗಿಂತ ಹಿರಿದಾದುದನ್ನು ನಾನೇನನ್ನೂ ತಿಳಿದಿಲ್ಲ–ಎಂದು ಶ್ರೀಕೃಷ್ಣಪರವಾದ ಸಗುಣ–ಸಾಕಾರ ವೈಷ್ಣವಭಕ್ತಿಯನ್ನೇ ವ್ಯಂಜಿಸಿದ್ದಾರೆ. ಇದನ್ನು ಯಾರೋ ಪ್ರಸ್ತಾಪಿಸಿ ಅವರನ್ನು ಕೇಳಿದರು 'ಸ್ವಾಮೀ ! ತಮ್ಮಂಥವರಿಗೂ ಈ ಬಗೆಯ ಸಿದ್ಧಾಂತದ್ವಂದ್ವವೇ ?' ಎಂದು.

ಆಗ ಮಧುಸೂದನ ಸರಸ್ವತಿಗಳು ಜ್ಞಾನ-ಭಕ್ತಿಯ ಪರಮಾರ್ಥ ತಿಳಿಸಿ, ಸಾಮರಸ್ಯವನ್ನು ಸಿದ್ಧಪಡಿಸಿ ಅಂತ್ಯದಲ್ಲಿ ಮೇಲಿನ ಉಪಜಾತಿವೃತ್ತವನ್ನು ಉತ್ತರವಾಗಿ ಹೇಳಿದರು.

"ನಾವು ಅದ್ವೈತಮಾರ್ಗದ ಪ್ರಯಾಣಿಕರಿಂದ ಪೂಜಿಸಲ್ಪಟ್ಟು, ಜೀವ ಬ್ರಹ್ಮೈಕ್ಯಸಿದ್ಧಾಂತದ ಸಿಂಹಾಸನವನ್ನು ಕಾಪಾಡುವ ಅಭೇದಸಾಮ್ರಾಜ್ಯ ರಕ್ಷಣದೀಕ್ಷೆಯವರು ದಿಟ; ಆದರೆ ಯಾವನೋ ಒಬ್ಬ ಗೋಪಿಕಾಜಾರನ ಮೊಂಡುತನದಿಂದಾಗಿ, ಧೂರ್ತತೆಯಿಂದಾಗಿ ಅವನ ದಾಸರಾಗಿಬಿಟ್ಟಿದ್ದೇವೆ !"

ಹೀಗೆ ವ್ಯಾಜಸ್ತುತಿಯ ಮೂಲಕ ರಮಣೀಯವಾಗಿ ಶ್ರೀಕೃಷ್ಣಭಕ್ತಿಗೆ ಸುಂದರ ಪೋಷಣೆಯನ್ನೊದಗಿಸಿದರು.

—೪೪—

ಚಕ್ರೇಣ ಮೋಚಯಾಂಚಕ್ರೇ ನಕ್ರಾಚ್ಚಕ್ರಾನುಜೋ ಗಜಂ ।
ಪ್ರಯಾಗೇಭಂ ಕರಗ್ರಾಹಕರಗ್ರಾಹಾತ್ ಕವೀಂದ್ರವತ್ ॥

ಕವೀಂದ್ರನೆಂಬ ಅನ್ವರ್ಥನಾಮದ ವಿದ್ವತ್ಕವಿಯು ಗೋದಾವರೀ ತೀರದಲ್ಲಿ ವಾಸವಾಗಿದ್ದ ಆಶ್ವಲಾಯನಶಾಖೆಯ ಸದ್ಬ್ರಾಹ್ಮಣ. ಬಾಲ್ಯದಲ್ಲಿಯೇ ಸಂನ್ಯಾಸಸ್ವೀಕಾರಮಾಡಿ ದೇಶಾಟನತತ್ಪರನಾಗಿದ್ದ. ಸರ್ವ ಶಾಸ್ತ್ರ ಪಾರಂಗತನಾಗಿದ್ದ ಈತನಿಗೆ ಅಸಾಧಾರಣ ವಾಕ್ಪರಿಪಾಟವವೂ, ಎಂಥವರನ್ನಾದರೂ ಮನವೊಲಿಸಿಕೊಳ್ಳುವ ಚಾತುರ್ಯವೂ ಇದ್ದಿತು.

ಭಾರತವು ಮುಸಲ್ಮಾನ್‌ದೊರೆಗಳಿಂದ ಆಕ್ರಾಂತವಾದಮೇಲೆ ಸನಾತನಧರ್ಮಕ್ಕೆ ಆ ವಿಧರ್ಮೀಯರು ಕೊಟ್ಟ ಕಿರುಕುಳ ಇತಿಹಾಸ ವಿದಿತವೇ. ಅಂಥ ಹಿಂಸೆಗಳಲ್ಲಿ ಪುಣ್ಯಕ್ಷೇತ್ರಗಳನ್ನು ನೋಡಲು ಹೋಗುವ ಹಿಂದೂಗಳು ತೆರಬೇಕಾಗಿದ್ದ ಭಾರಿಪ್ರಮಾಣದ ತೆರಿಗೆಯೂ ಒಂದು. ಬಾಬರ್ ಹುಮಾಯೂನ್, ಅಕ್ಬರರೂ ನಿರ್ಘೃಣರಾಗಿ ಹಾಕುತ್ತಿದ್ದ ಈ ತೆರಿಗೆಗಳು ಜಹಾಂಗೀರ್‌ನ ಕಾಲದಲ್ಲಿಯೂ ಉಳಿದಿದ್ದುವು. ಹಲವು ಶತಮಾನಗಳ ಈ ದುರಾಚಾರದಿಂದ ನೊಂದ ಹಿಂದೂಗಳು ಕವೀಂದ್ರಯತಿಯನ್ನು ಕೇಳಿಕೊಂಡಾಗ

ಆತ ಷಾಹ್‌ಜಹಾನನ ಬಳಿ ಹೋಗಿ ಪರಿಸ್ಥಿತಿಯನ್ನು ವಿವರಿಸಿ ಸಾಮಮಾರ್ಗದಿಂದಲೇ ಕಾಶಿ-ಪ್ರಯಾಗಾದಿ ತೀರ್ಥಕ್ಷೇತ್ರಯಾತ್ರಿಕರ ಕರಭಾರವನ್ನು ನೀಗಿಸಿದ. ಈತನ ಇಂಥ ಸದ್ವಿಜಯವನ್ನು ಕಂಡು ಆನಂದಿಸಿ ಅನೇಕರು ಸ್ತುತಿಸಹಸ್ರಗಳನ್ನು ಅರ್ಪಿಸಿದರು. ಇವುಗಳಲ್ಲೊಂದು ಮೇಲಿನ ಕಾಶೀವಾಸಿ ಶ್ರೀಕೃಷ್ಣೋಪಾಧ್ಯಾಯವಿರಚಿತ ಶ್ಲೋಕ.

"ಉಪೇಂದ್ರನೆನಿಸಿದ ಶ್ರೀಹರಿಯ ಚಕ್ರದಿಂದ ಮೊಸಳೆಯ ಬಾಯ್ಗೆ ಸಿಲ್ಕಿ ನೊಂದ ಗಜೇಂದ್ರನನ್ನು ಕಾಪಾಡಿದುದು ಪ್ರಯಾಗವೆಂಬ ಆನೆಯನ್ನು ತೆರಿಗೆಯೆಂಬ ಮೊಸಳೆಯಿಂದ ಕವೀಂದ್ರನು ಕಾಪಾಡಿದಂತಿದೆ "

ಅನುಪ್ರಾಸ ಶಬ್ದಾಲಂಕಾರ ಹಾಗೂ ಅಪ್ರಸಿದ್ಧವನ್ನೇ ಪ್ರಸಿದ್ಧದೊಡನೆ ಉಪಮಾನವಾಗಿ ಹೋಲಿಸಿದ ಪ್ರತೀಪಾಲಂಕಾರ ಸೇರಿ ರುಚಿರವಾದ ಈ ಪದ್ಯವು ಅಂದಿನ ಪರಿಷ್ಕಾರ ಪದ್ಧತಿಗೆ ದಾಖಲೆಯಾಗಿದೆ. ಆದರೆ ಮುಂದೆ ಅಚಿರದಲ್ಲಿಯೇ ಔರಂಗಜೇಬನು ಇಂಥ ತೆರಿಗೆಗಳನ್ನು ದುಪ್ಪಟ್ಟಾಗಿ ಜಾರಿ ಮಾಡಿದುದು ಇತಿಹಾಸದ ವಿಡಂಬನೆ.

## VIII

ತರುಣಂ ಸರ್ಷಪಶಾಕಂ ನವೌದನಂ ಪಿಚ್ಛಿಲಾನಿ ಚ ದಧೀನಿ ।
ಅಲ್ಪವ್ಯಯೇನ ಸುಂದರಿ ! ಗ್ರಾಮಜನೋ ಮಿಷ್ಟಮಶ್ನಾತಿ ॥

ಮುಘಲ್ ಚಕ್ರವರ್ತಿಗಳಲ್ಲಿ ಜಹಾಂಗೀರ್ ಮತ್ತು ಷಾಹ್‌ಜಹಾನ್ ಸಂಸ್ಕೃತ ಕವಿಪಂಡಿತಪೋಷಕರಲ್ಲಿ ಅಗ್ರೇಸರರು. ಜಗನ್ನಾಥ ಪಂಡಿತರಾಜರಂಥವರೂ ಇವರಲ್ಲಿ ಬೆಳೆದು ಬಂದವರು. ವಿಶೇಷತಃ ಷಾಹ್‌ಜಹಾನ್ ತುಂಬ ರಸಿಕ, ವಿದ್ವತ್ಪಕ್ಷಪಾತಿ. ಇವನ ಮಕ್ಕಳಲ್ಲಿ ಹಿರಿಯವನಾದ ಸದ್ಗುಣನಿಧಿ ದಾರಾಷುಕೋ ಸ್ವಯಂ ಸಂಸ್ಕೃತದಲ್ಲಿ ಪರಿಣತ. ಉಪನಿಷತ್ತುಗಳ

ಮೊದಲಾದ ಹಲವು ಸಂಸ್ಕೃತದ ಚಿರಮೌಲಿಕಕೃತಿಗಳನ್ನು ಪರ್ಷಿಯನ್ ಭಾಷೆಗೆ ಸ್ವಯಂ ಅನುವಾದಮಾಡಿದ, ಮಾಡಿಸಿದ ವಿಶಾಲ ಹೃದಯಿ. ಇವನ ತಂಗಿ ರೋಷನಾರಾ ಸಹ ಸ್ವಲ್ಪ ಸಂಸ್ಕೃತ ತಿಳಿದವಳೇ.'

ಒಮ್ಮೆ ರೋಷನಾರಾ ಪಲ್ಲಕ್ಕಿಯಲ್ಲಿ ಕುಳಿತು ಗ್ರಾಮೀಣಪ್ರದೇಶದಲ್ಲಿ ಸುತ್ತಾಡುವಾಗ ಅಲ್ಲಿ ಆರೋಗ್ಯದಿಂದ ದೃಢಕಾಯರಾಗಿ, ಪ್ರಫುಲ್ಲಿತ ಮನಸ್ಸಿನಿಂದ ಕಠಿನಕಾರ್ಯಗಳನ್ನೂ ಸಲೀಲವಾಗಿ ನಿರ್ವಹಿಸುವ ಕೆಲವು ಬಡ ಬ್ರಾಹ್ಮಣ ಬಾಲಕರನ್ನು ಕಂಡು ಅವರ ಆ ಪರಿಯ ಶಕ್ತಿಗೆ ಕಾರಣವಾದ ಊಟದ ವಿಧಾನ ಎಂಥದ್ದೆಂದು ತಿಳಿಯಲು ಕುತೂಹಲದಿಂದ ಪ್ರಶ್ನಿಸಿದಳಂತೆ ! ಆಗ ಆ ಹುಡುಗರಲ್ಲೊಬ್ಬ ಮೇಲ್ಕಾಣಿಸಿದ ಆರ್ಯೆಯನ್ನು ನುಡಿದ.

"ಎಳೆಯ ಹರುವೆಸೊಪ್ಪು, ಹೊಸ ಅಕ್ಕಿಯ ಅನ್ನ ಮತ್ತು ಕೆನೆ ಮೊಸರು— ಇವಿಷ್ಟೇ ಬಗೆಯ ಅಲ್ಪ ಖರ್ಚಿನ ಊಟದಿಂದಲೇ ಹಳ್ಳಿಯ ಜನರು ಸುಗ್ರಾಸಭೋಜನ ಮಾಡುತ್ತಾರೆ, ಸುಂದರಿ !"

ಸರಳವಾದ ಈ ಪದ್ಯದಲ್ಲಿ ನೆಮ್ಮದಿಯ ಜೀವನಕ್ಕೆ ದುಬಾರಿಯಲ್ಲದೆ ಹಿತವಾಗುವ ಸ್ವಾಸ್ಥ್ಯಸಂಹಿತೆಯ ಕಿವಿಮಾತು ಇರುವುದರಿಂದಲೇ ಇಂದಿಗೂ ಈ ನುಡಿ ನಿಂತಿದೆ.

—೪೬—

ಅಂಬೇತಿ ಗೌರೀಮಹಮಾಹ್ವಯಾಮಿ ಪತ್ನ್ಯಃ ಪಿತುರ್ಮಾತರ ಏವ ಸರ್ವಾಃ ।
ಕಥಂ ನು ಲಕ್ಷ್ಮೀರಿತಿ ಚಿಂತಯಂತಂ ಶಾಸ್ತಾರಮೀಡೇ ಸಕಲಾರ್ಥಸಿದ್ಧ್ಯೈ ॥೪೬॥

ಕ್ರಿ.ಶ. 16–17ನೆಯ ಶತಮಾನಸಂಧಿಯಲ್ಲಿದ್ದ ಶ್ರೀ ಅಪ್ಪಯ್ಯದೀಕ್ಷಿತರು ಅವತಾರಶಂಕರರೆಂದೇ ಪ್ರಸಿದ್ಧರಾದ ಮಹಾನುಭಾವರು. ತಮಿಳುನಾಡಿನ ತಂಜಾವೂರು ಪ್ರಾಂತದಲ್ಲಿದ್ದರೂ ಅಖಿಲಭಾರತದ ಪ್ರಕಾಂಡಪಂಡಿತರಿಂದ

ತಮ್ಮ ಕಾಲದಲ್ಲಿಯೇ ಪೂಜೆಯನ್ನು ಪಡೆದು ಸರ್ವತಂತ್ರಸ್ವತಂತ್ರರೆಂದೂ, ವೈದಿಕಮಾರ್ಗಧುರಂಧರರೆಂದೂ ಕೀರ್ತಿತರಾದವರು.

ಮಹಾವೈಯಾಕರಣಶಿರೋಮಣಿ ಭಟ್ಟೋಜಿದೀಕ್ಷಿತರೇ ಇವರ ಶಿಷ್ಯರಾಗಿ 'ಯತ್ಕೃತಿಬೋಧಾಬೋಧೌ ವಿದ್ವದವಿದ್ವದ್ವಿಭಾಜಕೋಪಾಧೀ' (ಅಪ್ಪಯ ದೀಕ್ಷಿತರ ಕೃತಿಗಳ ಜ್ಞಾನವನ್ನು ಹೊಂದಿರುವಿಕೆ—ಇಲ್ಲದಿರುವಿಕೆ ಎಂಬುದೇ ವಿದ್ವಾಂಸರನ್ನೂ, ಅವಿದ್ವಾಂಸರನ್ನೂ ವಿಭಾಗಿಸುವ ಅಳತೆಗೋಲು) ಎಂದು ಸ್ತುತಿಸಿದ್ದಾರೆ. ಸ್ವತಃ ನಿಸ್ಪೃಹರಾದ ದೀಕ್ಷಿತರನ್ನು ಭಕ್ತಿಯ ಒತ್ತಾಯದಿಂದ ಕಟ್ಟಿ ಅನೇಕ ರಾಜರುಗಳು ಗೌರವಿಸಿದ್ದರು. ಅವರಲ್ಲಿ ಚಿನ್ನಬೊಮ್ಮ ನೃಪತಿಯೂ ಒಬ್ಬ. ಈತನು ದೀಕ್ಷಿತರಿಗೆ ಕನಕಾಭಿಷೇಕ ಮಾಡಿದ್ದ.

ಒಮ್ಮೆ ಚಿನ್ನಬೊಮ್ಮನು ಮತ್ತಿತರ ವಿದ್ವಾಂಸರೊಡನೆ ಸಂಚರಿಸುವಾಗ ಯಾವುದೋ ಒಂದು ಗ್ರಾಮದಲ್ಲಿ ಅಯ್ಯಪ್ಪನ (ಶಾಸ್ತೃ ಅಥವಾ ಮಣಿಕಂಠನ) ವಿಲಕ್ಷಣ ವಿಗ್ರಹ ಕಂಡುಬಂದಿತು. ಯೋಗಪಟ್ಟದಲ್ಲಿರುವ ಆ ಮೂರ್ತಿಯ ಬಲಗೈಯ ತೋರುಬೆರಳು ಮೂಗಿನ ಮೇಲಿರುವಂತೆ ಶಿಲ್ಪಿತವಾಗಿದ್ದುದನ್ನು ಕಂಡು ಎಲ್ಲರೂ ವಿಸ್ಮಯಪಡುವಾಗ ಅಲ್ಲಿಯ ಸ್ಥಳೀಯರು ಈ ವಿಚಿತ್ರಶಿಲ್ಪದ ಹಿನ್ನೆಲೆ ಹೇಳಿದರು. ಅದರ ತಾತ್ಪರ್ಯವಿಷ್ಟು ; ಯಾರಾದರೂ ವಶ್ಯವಾಕ್ಯದ ಮಹಾಕವಿ ಈ ಬಗೆಯಲ್ಲಿ ಶಾಸ್ತೃವು ಮೂಗಿನ ಮೇಲೆ ಬೆರಳಿರಿಸಿಕೊಂಡಿರುವುದರ (ವಿಸ್ಮಯದ ಸಂಕೇತ) ಕಾರಣವನ್ನು ಕವಿತಾರೂಪವಾಗಿ ಹೇಳಿದರೆ ಈ ಶಿಲಾಮೂರ್ತಿಯು ತನ್ನ ಹಸ್ತಮುದ್ರೆಯನ್ನು ಅಭಯಾತ್ಮಕವಾಗಿ ತಾನೇ ಬದಲಿಸಿಕೊಳ್ಳುತ್ತದೆ. ಆದರೆ ಅದೆಷ್ಟೋ ಕವಿಗಳು ಬಂದು ಏನೇನು ಕಾರಣಗಳನ್ನು ಕಮನೀಯಕವಿತೆಯಾಗಿ ಕಲ್ಪಿಸಿದರೂ ಈ ಮೂರ್ತಿಯ ಭಂಗಿ ಬದಲಾಗಿಲ್ಲ. ಇದನ್ನು ಇದನ್ನು ಕೇಳಿದೊಡನೆಯೇ ಹಲವರು ಪಂಡಿತರು ಚಿನ್ನಬೊಮ್ಮನ ಅನುಮತಿಯಿಂದ ಕವಿತೆ ಕಟ್ಟಲು ತೊಡಗಿದರು. ವಿಗ್ರಹವಾದರೋ ಅಲ್ಲಾಡಲಿಲ್ಲ. ವೀರವೈಷ್ಣವರೊಬ್ಬರು ಗೇಲಿಯ

ಪದ್ಯವನ್ನು* ಮಾರ್ಮಿಕವಾಗಿ ರಚಿಸಿದರೂ ಮೂರ್ತಿಯ ಮುದ್ರೆ ವ್ಯತ್ಯಸ್ತವಾಗಲಿಲ್ಲ. ಆಗ ಅಪ್ಪಯ್ಯದೀಕ್ಷಿತರು ಮೇಲಿನ ಉಪಜಾತಿವೃತ್ತದ ಪದ್ಯವನ್ನು ಆಶುವಾಗಿ ಹೇಳಿದರು.

"ಗೌರಿಯನ್ನು ತಾಯಿಯೆಂದು ಕರೆಯುತ್ತೇನೆ, ತಂದೆಯ ಹೆಂಡಿರೆಲ್ಲರೂ ತಾಯಂದಿರಲ್ಲವೇ ! ಆದರೆ ಲಕ್ಷ್ಮಿಯನ್ನು ಏನೆಂದು ಕರೆಯಲಿ ?—ಹೀಗೆ ಚಿಂತಿತನಾಗಿ ಸವಿಸ್ಮಯಮುದ್ರನಾದ ಶಾಸ್ತೃವನ್ನು ಇಷ್ಟಾರ್ಥಸಿದ್ಧಿಗಾಗಿ ಆಶ್ರಯಿಸುತ್ತೇನೆ"

ಹರಿಯು ಮೋಹಿನೀರೂಪದಿಂದ ಶಿವನೊಡನೆ ಕಲೆತು ಪಡೆದ ಹರಿಹರಸುತ ಮಣಿಕಂಠನ ಸಂದಿಗ್ಧವನ್ನು ಹೀಗೆ ರಮಣೀಯವಾಗಿ ದೀಕ್ಷಿತರು ಕವನಿಸಿದೊಡನೆಯೇ ಮಣಿಕಂಠನ ಹಸ್ತಭಂಗಿ ಬದಲಾಗಿ ಅಭಯಮುದ್ರೆ ರಾರಾಜಿಸಿತು !

—೪೭—

ಕಾಂಚಿತ್ಕಾಂಚನಗೌರಾಂಗೀಂ ವೀಕ್ಷ್ಯ ಸಾಕ್ಷಾದಿವ ಶ್ರಿಯಂ ।
ವರದಸ್ಸಂಶಯಾಪನ್ನೋ ವಕ್ಷಸ್ಥಲಮುದೈಕ್ಷತ ॥

ಶ್ರೀಮದಪ್ಪಯ್ಯದೀಕ್ಷಿತರು ಕರ್ಮಠರಾದ ವೈದಿಕವರೇಣ್ಯರೂ, ಷಟ್ಶಾಸ್ತ್ರಪಾರಂಗತರೂ ಆಗಿದ್ದರೂ ಕೇವಲ ಶುಷ್ಕಛಾಂದಸ ಗುಣದಿಂದ

* ಆ ಗೇಯಿಯ ಪದ್ಯವಿಂತಿದೆ :
[illegible]
[illegible]

ಕವಿತೆಗೆ ವಿಮುಖರಾಗಿರಲಿಲ್ಲ. ಸರಸಕವಿತಾನಿಧಿಯೂ, ಅಲಂಕಾರಶಾಸ್ತ್ರ ಪ್ರವೀಣರೂ ಆಗಿದ್ದರು. ಅವರ ಶಿಷ್ಯ-ಪ್ರಶಿಷ್ಯರೂ, ಪುತ್ರ-ಪೌತ್ರಾದಿಗಳೂ ಕವಿತಾಕಲಾಕ್ಷತರೇ. ಇದಕ್ಕೆ ಕಾರಣಗಳಲ್ಲೊಂದು ಅವರ ಪೂರ್ವಿಕರೂ ಕವಿಗಳಾಗಿದ್ದುದೇ ಇರಬಹುದು.

ಅಚ್ಚಾನ್‌ದೀಕ್ಷಿತರು ಅಪ್ಪಯ್ಯದೀಕ್ಷಿತರ ಪಿತಾಮಹರು. ಒಮ್ಮೆ ಕಂಚಿಯಲ್ಲಿ ವರದರಾಜಸ್ವಾಮಿಯನ್ನು ದರ್ಶಿಸಲು ಸಾಹಿತೀಸಮರಾಂಗಣ ಸಾರ್ವಭೌಮ ಶ್ರೀಕೃಷ್ಣದೇವರಾಯನು ಪತ್ನೀದ್ವಿಯನಾಗಿ ಬಂದಿರುವಾಗ ಅಚ್ಚಾನ್‌ದೀಕ್ಷಿತರನ್ನು ಮಹಾರಾಣಿಯ ವರ್ಚಸ್ಸನ್ನು ವರ್ಣಿಸುವಂತೆ ಕೇಳಿಕೊಂಡ ಸಂದರ್ಭದಲ್ಲಿ ಅವರು ಕೂಡಲೇ ಮೇಲಿನ ಶ್ಲೋಕವನ್ನು ರಚಿಸಿದರಂತೆ ;

“ಬಂಗಾರದ ಬಣ್ಣದಲ್ಲಿ ಕಂಗೊಳಿಸುತ್ತಾ ಸಾಕ್ಷಾತ್ ಲಕ್ಷ್ಮಿಯಂತೆ ಎದುರಾದ ಈ ಒಬ್ಬಾಕೆಯನ್ನು ನೋಡಿ ವರದರಾಜನು ಒಡನೆಯೇ ಗಾಬರಿ-ಸಂದೇಹಗಳಿಂದ ಎದೆಯನ್ನು ತಡವಿಕೊಂಡು ನೋಡಿಕೊಳ್ಳತೊಡಗಿದ !”

ಗುಣೀಭೂತವ್ಯಂಗ್ಯವಿರುವ ಸಂದೇಹಾಲಂಕಾರದ ಮೂಲಕ ಮಹಾರಾಣಿಯ ಸೌಂದರ್ಯ ಲಕ್ಷ್ಮೀಸದೃಶವಾದ್ದೆಂದು ಕವಿಯು ವರ್ಣಿಸಿರುವ ಪರಿಗೆ ಮನಸೋತು ಸ್ವಯಂ ಕವಿವರನಾದ ಕೃಷ್ಣದೇವರಾಯನು ಅಚ್ಚಾನ್ ದೀಕ್ಷಿತರಿಗೆ “ವಕ್ಷಃಸ್ಥಲಾಚಾರ್ಯ” ಎಂಬ ಬಿರುದಿನೊಡನೆ ಸಂಮಾನ ಮಾಡಿದನಂತೆ.

—೪೮—

ಅಕ್ಷರಾಣಿ ಪರೀಕ್ಷ್ಯಂತಾಂ ಅಂಬರಾಡಂಬರೇಣ ಕಿಂ ।
ಶಂಭುರಂಬರಹೀನೋಽಪಿ ಸರ್ವಜ್ಞ ಇತಿ ಕೀರ್ತಿತಃ ॥

ಶ್ರೀಮದಪ್ಪಯ್ಯದೀಕ್ಷಿತರು ಯಾವ ರಾಜಾಸ್ಥಾನದ ಪಂಡಿತರೂ ಆಗಿರಲಿಲ್ಲ. ಆದರೂ ಚಿನ್ನಬೊಮ್ಮ, ಅಚ್ಯುತಪ್ಪನಾಯಕ, ರಘುನಾಥ

ನಾಯಕ, ಕೃಷ್ಣಪ್ಪನಾಯಕ ಮೊದಲಾದ ಅನೇಕ ಭೂಪಾಲರಿಂದ ಸರ್ವ ಸಂಮಾನಗಳನ್ನೂ ಪಡೆದಿದ್ದರು. ಹೀಗಿದ್ದರೂ ವೇದಾಂತದಲ್ಲಿ ಅನುಭವ ಪೂರ್ವಕ ಶ್ರದ್ಧೆಯಿದ್ದುದರಿಂದ ವೈರಾಗ್ಯ ಸಹಜವಾಗಿ, ಆಡಂಬರವು ಸ್ವಲ್ಪವೂ ಇರಲಿಲ್ಲ. ಆದರೆ ಇಂಥ ಸಾರಳ್ಯವನ್ನು ದೌರ್ಬಲ್ಯವೆಂದೂ, ಅಲ್ಪಶ್ರುತತ್ವ ವೆಂದೂ ತಪ್ಪು ತಿಳಿದವರೂ ಇಲ್ಲದಿರಲಿಲ್ಲ.

ಇಂಥ ಪಂಡಿತ ಸಮೂಹವೊಮ್ಮೆ ದೀಕ್ಷಿತರ ಸರಳತೆಯನ್ನು ಅಜ್ಞಾನಕ್ಕೆ ಪರ್ಯಾಯವಾಗಿ ತಿಳಿಯಿತಂತೆ. ತಮ್ಮ ಇಷ್ಟದೈವವಾದ ಶಿವನಂತೆಯೇ ತಾವೂ ನಿರಾಡಂಬರ ಮೂರ್ತಿಯಾದ ದೀಕ್ಷಿತರು ಸಹನೆ ಮೀರಿದಾಗ ತಾವು ಯಾರೆಂಬ ಪರಿಚಯವನ್ನು ಮಾಡಿಕೊಟ್ಟರು. ಇವರೇ ಸರ್ವತಂತ್ರಸ್ವತಂತ್ರ ಅಪ್ಪಯ್ಯದೀಕ್ಷಿತರೆಂಬ ಪ್ರತ್ಯಭಿಜ್ಞೆಯಾಗದೆ ಯಾರೋ ಶಾಸ್ತ್ರಗಂಧವೂ ಇಲ್ಲದ ಬಡಹಾರುವನೆಂದು ಭಾವಿಸಿದ್ದ ಆ ಗುಂಪು ಬೆರಗಾಗಿ, ತಪ್ಪಿಗಾಗಿ ನಾಚಿ ಕ್ಷಮೆ ಕೋರಿ, ದೀಕ್ಷಿತರ ಸಾರಳ್ಯವೇ ತಮ್ಮನ್ನು ಅಜ್ಞತಾರಿಗೆ ಎಳೆಯಿತೆಂದು ಸಗರ್ಭ ವಾಗಿ ನುಡಿದಾಗ ಅವರು ಮೇಲಿನ ಶ್ಲೋಕವನ್ನು ಆಶುವಾಗಿ ಹೇಳಿದರು.

"ಅಕ್ಷರಗಳನ್ನು (ವಿದ್ಯೆಯನ್ನು) ಪರೀಕ್ಷಿಸೋಣವಾಗಲಿ, ಬಟ್ಟೆಗಳ ಬಿನ್ನಾಣದಿಂದೇನು ? ಶಿವನು ದಿಗಂಬರನಾಗಿದ್ದೂ ಸರ್ವಜ್ಞನೆಂದು ಸ್ತುತ ನಾಗಿಲ್ಲವೇ ?"

ಆ ಪಂಡಿತಮಂಡಲಿ ಇದನ್ನು ಕೇಳಿ ಪುನಃ ನಮಿಸಿ ವಿವೇಕ ತಂದು ಕೊಂಡಿತು.

—೪೯—

ನಾಹಮಧೀತೀ ವೇದೇ ನ ಚ ಪಠಿತೀ ಯತ್ರ ಕುತ್ರಚಿಚ್ಛಾಸ್ತ್ರೇ ।
ಕಿಂತು ದರೇಂದುವತಂಸಿನಿ ಪುರಹಿಂಸಿನಿ ಭೂಯಸೀ ಭಕ್ತಿಃ ॥

ಅಪ್ಪಯ್ಯದೀಕ್ಷಿತರ ವಿದ್ವತ್ತೆ–ಅನುಭೂತಿ-ಸಜ್ಜನಿಕೆ-ಉಪಶಾಂತಿಗಳು ಲೋಕವಿಖ್ಯಾತವಾದ ಮೇಲೆ ಅವರನ್ನು ದರ್ಶಿಸಿ ಕೃತಾರ್ಥರಾಗಲೆಂದು ಅನೇಕ

ಜನರು ಬಂದು ಆನಂದಿಸಿ ಹೋಗುತ್ತಿದ್ದರು. ಕೆಲವರು ಅವರ ಸರಳತೆಯ ಕಲ್ಪನೆಯಿಲ್ಲದ ಕಾರಣ ಮೊದಲಿಗೆ ಗುರುತಿಸಲಾಗದೆ ಪೇಚಿಗೂ ಸಿಲುಕುತ್ತಿದ್ದರು. ಹೀಗೆಯೇ ಒಂದು ಬಾರಿ ರಾಮೇಶ್ವರಕ್ಕೆ ಹೋಗಿ ಬರುತ್ತಿದ್ದ ಚಿತ್ತರೇಯ ಪಂಡಿತ ಮಂಡಲಿಯೊಂದು ಅಪ್ಪಯ್ಯದೀಕ್ಷಿತರ ಮನೆಗೂ ಪ್ರವೇಶಿಸಿತು. ಸರಳವಸ್ತ್ರಗಳಲ್ಲಿದ್ದ ಅವರನ್ನು ಮತ್ತಾರೋ ಎಂದು ಭಾವಿಸಿ ಜರ್ಬಿನಿಂದ 'ನೀವೇನು ಓದಿದ್ದೀರಿ ?' ಎಂದು ಪ್ರಶ್ನಿಸಲು ದೀಕ್ಷಿತರು ತಮ್ಮ ಅನುದ್ವೇಜಕ ಸರಸಹಾಸ್ಯಪ್ರವೃತ್ತಿಗೂ, ನಿಸರ್ಗಸುಭಗ ವಿನಯಕ್ಕೂ ತಕ್ಕಂತೆ ಮೇಲಿನ ಪದ್ಯವನ್ನು ಆಶುವಾಗಿ ಹೇಳಿದರಂತೆ ;

'ನಾನು ವೇದದಲ್ಲಿ ಅಭ್ಯಾಸಮಾಡಿಲ್ಲ, ಯಾವುದೇ ಶಾಸ್ತ್ರಗಳಲ್ಲಿ ವ್ಯಾಸಂಗವಿಲ್ಲ. ಆದರೆ ಬಾಲೇಂದು ಮೌಳಿಯಾದ ತ್ರಿಪುರಾರಿಯಲ್ಲಿ (ಶಿವನಲ್ಲಿ) ಗಾಢವಾದ ಭಕ್ತಿಯಿದೆ"

ಸರಳವಾದ ತಾತ್ಪರ್ಯವುಳ್ಳ ಈ ಪದ್ಯದ ಅರ್ಥ ವ್ಯಾಖ್ಯಾಪಾಕವಾದರೂ ಶಬ್ದವು ನಾರಿಕೇಳಪಾಕ. ಇದರ ಬಹುತೇಕ ಶಬ್ದಗಳ ನಿಷ್ಪತ್ತಿ ಸೂಕ್ಷ್ಮವಾದ ವ್ಯಾಕರಣವಿಶೇಷತೆಯನ್ನೂ, ಶ್ಲಕ್ಷ್ಣವಾಣನೀಯ ಪರಿಜ್ಞಾನವನ್ನೂ ಅಪೇಕ್ಷಿಸುತ್ತದೆ. ಅಧೀತೀ, ಪಠಿತೀ ಎಂಬ ರೂಪಗಳ ಸಾಧನೆ–ಸ್ವಾರಸ್ಯ ವೈಯಾಕರಣಿಗೇ ವಿದಿತ. 'ಮತಂಗಿಸಿ' 'ಪುರಹಿಂಗಿಸಿ' ಇತ್ಯಾದಿರೂಪಗಳೂ ಕಿಂಚಿತ್ ಅಪ್ರಚುರ. ಇವುಗಳ ಮಾಧುರ್ಯ ಶ್ರುತಿವೇದ್ಯ.

---

ಟಿಪ್ಪಣಿ :- ಅಧೀತೀ ವ್ಯಾಕರಣೇ ಅಧೀತಮನೇನೇತಿ ಇಷ್ಟಾದಿಭ್ಯಶ್ಚೇತಿ ಕರ್ತರೀನಿಃ ।

—ಸಿದ್ಧಾಂತಕೌಮುದೀ (1888)

ಇಷ್ಟಾದಿಭ್ಯಶ್ಚ — ಅಷ್ಟಾಧ್ಯಾಯೀ (V - 2 - 88)

—೫೦—

ಶಿವಾದಪ್ಯಧಿಕೋ ವಿಷ್ಣುಃ ವಿಷ್ಣೋರಪ್ಯಧಿಕೋಽಸ್ಮ್ಯಹಂ ।
ಶಿವಸ್ಯೈಕಂ ವಿಷ್ಣೋರ್ದಶ ಮಮ ಜನ್ಮ ಸಹಸ್ರಶಃ ॥

ಅಪ್ಪಯ್ಯದೀಕ್ಷಿತರು ನೂರನಾಲ್ಕು ಗ್ರಂಥಗಳನ್ನು ಬಹುಶಾಸ್ತ್ರಗಳನ್ನು ಖಚಿತಂತೆ ರಚಿಸಿ ತತ್ತ್ವತಃ ಹರಿಹರಾಭೇದವನ್ನು ಪಾಲಿಸಿದವರು. ಆದರೆ ಇಂಥ ವಿದ್ವಾಂಸರಿಂದ ಶೈವಾಧಿಕ್ಯವನ್ನೂ ವೈಷ್ಣವಾಧಿಕ್ಯವನ್ನೂ ಸ್ಥಾಪಿಸಿ ಮೇಲ್ಗೈಯ್ಯಾಗಬೇಕೆಂದು ಆಯಾ ಮತದ ಉಗ್ರವಾದಿಗಳು ಸದಾ ತಹತಹಿಸುತ್ತಿದ್ದರು. ಹೀಗಿರಲು ಒಮ್ಮೆ ವೀರವೈಷ್ಣವಸಮೂಹವೊಂದು ದೀಕ್ಷಿತರ ಬಳಿ ಬಂದು ವಿಷ್ಣುವೇ ಹೆಚ್ಚೆಂದು ಅವರು ಹೇಳಿಕೆ ಕೊಡಬೇಕಾಗಿ ಪೀಡಿಸಿದಾಗ ದೀಕ್ಷಿತರು ನಕ್ಕು 'ಶಿವನಿಗಿಂತಲೂ ವಿಷ್ಣುವೇ ಹೆಚ್ಚು' ಎಂದರು. ಇದನ್ನು ಕೇಳಿದ ಆ ಹರಿಭಕ್ತರು ಆನಂದದಿಂದ ಹೋದರು. ಈ ವಿಚಾರವನ್ನರಿತು ಉಗ್ರಶೈವವಾದಿಗಳು ದೀಕ್ಷಿತರ ಬಳಿ ಬಂದು 'ನಮಗೆ ಅನ್ಯಾಯ ಮಾಡಿದಿರಲ್ಲಾ' ಎಂದು ಆಕ್ರೋಶಿಸಿದಾಗ ಅವರು ಪುನಃ ಸಸ್ಮಿತರಾಗಿ 'ವಿಷ್ಣುವಿಗಿಂತಲೂ ನಾನೇ ಹೆಚ್ಚು' ಎಂದರು. ಇದರ ತಾತ್ಪರ್ಯವು ಶಿವಾಧಿಕ್ಯವೇಂದು ತಿಳಿದು ಶಿವಭಕ್ತರು ಹರ್ಷದಿಂದ ತೆರಳಿದರು. ಬಳಿಕ ಹರಿಭಕ್ತರೂ, ಹರಭಕ್ತರೂ ಸ್ವಾಧಿಕ್ಯಸ್ಥಾಪನೆಗೆಂದು ಒಂದೆಡೆ ಸೇರಿದಾಗಲೇ ಉಭಯ ಪಕ್ಷಗಳಿಗೂ ದೀಕ್ಷಿತರ ಜಾಣ್ಮೆಯ ಹೇಳಿಕೆ ಅರಿವಾದದ್ದು ! ಕೂಡಲೇ ಅವರು ಪುನಃ ಕಕ್ಕಾವಿಕ್ಕಿಯಾಗಿ ಒಟ್ಟಾಗಿ ದೀಕ್ಷಿತರ ಬಳಿ ಬಂದಾಗ ಅವರು ತಮ್ಮ ಹೇಳಿಕೆಯನ್ನಿಂತು ಪೂರ್ಣ ಮಾಡಿದರು. 'ಶಿವನಿಗೊಂದು, ವಿಷ್ಣುವಿಗೆ ಹತ್ತು, ನನಗೆ ಸಾವಿರಾರು– ಜನ್ಮಗಳು ! !' ಈ ಚತುರೋಕ್ತಿಯ ಮೂಲಕ ಮಾನವನ ಅಲ್ಪತೆಯನ್ನು ಎಲ್ಲರಿಗೂ ಮನವರಿಕೆ ಮಾಡಿಸಿ ಶಿವ-ವಿಷ್ಣುಗಳನ್ನು ಅಳೆಯುವ ಧಾರ್ಷ್ಟ್ಯ ಸಲ್ಲದೆಂದು ಬುದ್ಧಿಹೇಳಿ ಉಪಾಸಕನ ಅಂತರಂಗ ಪರಿಪಾಕಾನುಸಾರವಾಗಿ ನಿರಂಜನನಾದ ಪರಮಾತ್ಮನ ಸಾಕಾರಾರ್ಚನೆ ಬೇಕಿದೆಯೆಂದು ವಿವೇಕವನ್ನು ತಿಳಿಸಿ ವಿರಮಿಸಿದರು.

—೫೧—

ಮಾರಮಣಮುಮಾರಮಣಂ ಫಣಧರತಲ್ಪಂ ಫಣಾಧರಾಕಲ್ಪಂ ।
ಮುರಮಥನಂ ಪುರಮಥನಂ ವಂದೇ ಬಾಣಾರಿಮಸಮಬಾಣಾರಿಂ ॥

ಶ್ರೀಮದಪ್ಪಯ್ಯದೀಕ್ಷಿತರು ಮೂಲತಃ ಅದ್ವೈತಿಗಳು. ಉಪಾಸನಾತ್ಮಕ ಪ್ರೀತಿಯಿಂದಾಗಿ ಶಿವಾದ್ವೈತದಲ್ಲಿ ಆಸ್ಥೆ. "ಶಿಖರಿಣೀಮಾಲಾ" ಎಂಬ ಕೃತಿಯಿಂದ ತಮ್ಮ ಶಿವಪಾರಮ್ಯ ಭಕ್ತಿಯನ್ನು ಮೆರೆದಿದ್ದರು. ಹೀಗಿದ್ದೂ ವಿಷ್ಣುದ್ವೇಷಿಯಿರಲಿಲ್ಲ. ವರದರಾಜಸ್ತವದ ಮೂಲಕ ತಮ್ಮ ವೈಷ್ಣವತ್ವವನ್ನು ಜಗತ್ತಿಗೆ ತೋರಿಸಿದ್ದರು. ಶಿವ-ಕೇಶವರಲ್ಲಿ ಭೇದವಿಲ್ಲದ ಪರಮೋಚ್ಚವಾದ ಶಾಂಕರಾದ್ವೈತದಲ್ಲಿ ಅಚಲಶ್ರದ್ಧೆ ಅವರದಾಗಿತ್ತು. ಕೆಲವರು ವೀರವೈಷ್ಣವರು ಶಿವನಿಂದೆ ಮಾಡಿದಾಗ ಅವರನ್ನೂ ; ವಿಷ್ಣುದ್ವೇಷ ಮಾಡಿದಾಗ ದುರಭಿಮಾನಿ ಶೈವರನ್ನೂ ತರಾಟೆಗೆ ತರುತ್ತಿದ್ದರು.

ಚಿದಂಬರದಲ್ಲಿ ನಟರಾಜನ ದೇವಾಲಯದ ಗರ್ಭಗೃಹದ ಎದುರೇ ಪಾರ್ಶ್ವಾಭಿಮುಖವಾಗಿ ಗೋವಿಂದರಾಜನ ಸನ್ನಿಧಿ. ಕೆಲವರು ಶೈವರು ಅಸಹನೆಯಿಂದ ಈ ಹರಿಹರಸಮನ್ವಯವನ್ನು ಒಪ್ಪದೆ ಗೋವಿಂದರಾಜನ ದೇವಾಲಯವನ್ನು ಮುಚ್ಚಿಸಿದಾಗ ದೀಕ್ಷಿತರು ಆಗ್ರಹದಿಂದ ಬಾಗಿಲು ತೆರೆಯಿಸಿ ಪೂಜೆಗೆ ಅನುವು ಮಾಡಿಕೊಟ್ಟು ಹರಿಹರಾಭೇದ ಸಾರುವ ಸ್ತೋತ್ರರಚನೆಯಿಂದ ಜನತೆಗೆ ಸನ್ಮಾರ್ಗದರ್ಶನ ಮಾಡಿದರು. ಆ ಸಂದರ್ಭದಲ್ಲಿ ಆಶುವಾಗಿ ಅವರು ಹೇಳಿದ ಶ್ರುತಿಸುಂದರ ಸ್ತುತಿಯಲ್ಲೊಂದು ಮೇಲಿನ ಗೀತಿಚ್ಛಂದಸ್ಸಿನ ಪದ್ಯ. ಇದರ ಮಧುರ ಪದಪದ್ಧತಿ ಶ್ರವಣೀಯವಾಗಿದೆ.

"ಮಾ(ಲಕ್ಷ್ಮೀ)ರಮಣನನ್ನೂ ಉಮಾರಮಣನನ್ನೂ, ಸರ್ಪದ ಹಾಸಿಗೆಯವನನ್ನೂ ಸರ್ಪದ ಹಾರದವನನ್ನೂ, ಮುರವೈರಿಯನ್ನೂ ತ್ರಿಪುರ

ವೈರಿಯನ್ನೂ, ಬಾಣಾಸುರಮಾರಕನನ್ನೂ ವಿಷಮಬಾಣ(ಮನ್ಮಥ)ನ ಮಾರಕನನ್ನೂ ನಮಿಸುತ್ತೇನೆ."

ಈ ಬಗೆಯ ವಿವೇಕದಿಂದಾಗಿ ಕ್ರಮೇಣ ಆ ಕಾಲದ ಮತಕಲಹವೌಧ್ಯವೂ ಅಡಗಿತು.

—೫೨—

ಅಕೃಶಂ ಕುಚಯೋಃ ಕೃಶಂ ವಲಗ್ನೇ ವಿಪುಲಂ ವಕ್ಷಸಿ ವಿಸ್ತೃತಂ ನಿತಂಬೇ ।
ಅಧರೇಽರುಣಮಾವಿರಸ್ತು ಚಿತ್ತೇ–ಕರುಣಾಶಾಲಿ ಕಪಾಲಿಭಾಗದೇಯಂ ॥

ಮಹಾನುಭಾವರಾದ ಶ್ರೀಮದಪ್ಪಯ್ಯದೀಕ್ಷಿತರಿಗೆ ಹನ್ನೊಂದು ಜನ ಗಂಡುಮಕ್ಕಳಿದ್ದರೆಂದು ಪ್ರತೀತಿ. ಅವರೆಲ್ಲರೂ ಸದಾಚಾರ ಸಂಪನ್ನರಾಗಿ, ವಿದ್ಯಾವಿನಯ ವಿಭೂಷಿತರಾಗಿದ್ದರು. ಹೀಗಿರಲು ಅವರಲ್ಲೊಬ್ಬನು ಒಮ್ಮೆ ಯಾವಳೋ ಒಬ್ಬ ಸುಂದರಿಯನ್ನು ಕಂಡು, ಅವಳ ರೂಪವನ್ನೇ ಧ್ಯಾನಿಸುತ್ತಾ ಮನೆಯಲ್ಲಿ ಕುಳಿತು ಮೇಲೆ ಉಲ್ಲೇಖಿಸಿದ ಪದ್ಯದ ಮೂರುಪಾದಗಳನ್ನು ರಚಿಸಿದನಂತೆ.

"ಕುಚಗಳು ತುಂಬಿಕೊಂಡು, ನಡುವು ಬಡವಾಗಿಯೂ ; ಎದೆಯು ವಿಸ್ತೃತವಾಗಿ, ನಿತಂಬವು ವಿಶಾಲವಾಗಿಯೂ ; ತುಟಿಯು ಕೆಂಬಣ್ಣದಲ್ಲಿಯೂ ಇರುವ ರೂಪವು ನನ್ನ ಮನಸ್ಸಿನಲ್ಲಿ ನೆಲಸಲಿ..." ಎಂಬ ತಾತ್ಪರ್ಯದ ರಚನೆಯನ್ನು ಅಕಸ್ಮಾತ್ತಾಗಿ ಅತ್ತಕಡೆ ಸುಳಿದ ಅಪ್ಪಯ್ಯದೀಕ್ಷಿತರು ಕಂಡು ಕೂಡಲೇ ಮಗನ ಇಂಗಿತವನ್ನರಿತು ಆತನು ನಾಲ್ಕನೆಯ ಪಾದವನ್ನು ಬರೆಯುವ ಮುನ್ನವೇ, ತಾವೇ ಆಶುವಾಗಿ ಪಾದಪೂರಣವನ್ನು ಮಾಡಿದರಂತೆ —"ಅದು (ಆ ರೂಪವು) ಕೃಪಾಶಾಲಿಯೂ, ಕಪಾಲಿಯ (ಶಿವನ) ಸೌಭಾಗ್ಯವೂ ಆಗಿದೆ !"

ಪುತ್ರನ ರಕ್ಷೆಯನ್ನು ಭಕ್ತಿಯಾಗಿ ಬದಲಾಯಿಸಿದ ಅಪ್ಪಯ್ಯದೀಕ್ಷಿತರ ಪ್ರತಿಭೆ ಮತ್ತು ಪಾರಮಾರ್ಥಿಕ ಬುದ್ಧಿಗಳಲ್ಲಿ ಅತ್ಯಂತ ಸ್ತುತ್ಯರ್ಹ. ಏಕೆಂದರೆ ಮಗನು ಕೇವಲ ದೈಹಿಕ ಸೌಂದರ್ಯವನ್ನೇ ವರ್ಣಿಸಲು ಕುಚ-ಕಟಿ-ನಿತಂಬ-ಅಧರಾದಿ ಭೋಗ್ಯಾಂಗಗಳನ್ನು ಹೆಸರಿಸಿ ಪದ್ಯವನ್ನಾರಂಭಿಸಲು ದೀಕ್ಷಿತರು ಇವೆಲ್ಲವನ್ನೂ ಜಗನ್ಮಾತೆಗೆ ಅನ್ವಯಿಸಿದ್ದು ಮಾತ್ರವಲ್ಲದೆ 'ಕಪಾಲಿಭಾಗ ಧೇಯಂ' ಎಂಬ ಶಬ್ದವಿಶೇಷದಿಂದ ಇಂಥ ದೈಹಿಕಸೌಂದರ್ಯವೆಲ್ಲವೂ ಪರಮವೈರಾಗ್ಯಶಾಲಿಯಾದ ಶಿವನಿಗೇ ಸೇರಿತೆಂದೂ, ಈ ಬಗೆಯ ಐಂದ್ರಿಯ ಸಂಪದಕ್ಕೆಲ್ಲ ಅಂತಿಮಗತಿ ಕಪಾಲಾದಿ ಬೀಭತ್ಸಸ್ಥಿತಿಯಲ್ಲೆಂದೂ ವ್ಯಂಜಿಸಿ ತನ್ಮೂಲಕ ದೇಹರಂಗದ ಐಹಿಕಭೋಗದ ಅನಿತ್ಯತೆಯನ್ನೂ, ಆತ್ಮರಂಗದ ಅಲೌಕಿಕಯೋಗದ ನಿತ್ಯತೆಯನ್ನೂ ಸ್ಫುರಣಗೊಳಿಸಿದ ರೀತಿ ಅಸಾಧಾರಣ. ಇದರಿಂದಲ್ಲವೇ ದೀಕ್ಷಿತರು ಸರ್ವತಂತ್ರಸ್ವತಂತ್ರರೆನಿಸಿದ್ದು !!

— ೫೩ —

ಆಭಾತಿ ಹಾಟಕಸಭಾನಟಪಾದಪದ್ಮ-
ಜ್ಯೋತಿರ್ಮಯೋ ಮನಸಿ ಮೇ ತರುಣಾರುಣೋಽಯಂ ।
ನೂನಂ ಜರಾಮರಣಘೋರಪಿಶಾಚಕೀರ್ಣಾ
ಸಂಸಾರಮೋಹರಜನೀ ವಿರತಿಂ ಪ್ರಯಾತಾ ॥

ಅಪ್ಪಯ್ಯದೀಕ್ಷಿತರು ಕಾಶಿಯಲ್ಲಿಯೇ ದೇಹತ್ಯಾಗಮಾಡಬೇಕೆಂಬ ಮಹದಾಕಾಂಕ್ಷೆಯಿಂದ ಹೊರಟರಾದರೂ ಚಿದಂಬರದಲ್ಲಿಯೇ ತಮ್ಮ ಅಂತಿಮಾವಸ್ಥೆ ಬಂದುದನ್ನರಿತು ಆಕಾಶಲಿಂಗಕ್ಷೇತ್ರವೂ, ಅದ್ವೈತ ಪ್ರತಿಪಾದಕ ನಿರ್ಗುಣತತ್ತ್ವಸಾಕ್ಷಿಯೂ ಆದ ಆ ಸ್ಥಳದ ನಟರಾಜದೇವಸ್ಥಾನದಲ್ಲಿ ಕನಕ ಸಭಾಪತಿಯ ಚರಣತಲದಲ್ಲಿ ತಲೆಯನ್ನಿರಿಸಿ 'ಈ ಚಿದಂಬರವು ಪುಣ್ಯಸ್ಥಳ. ಮಕ್ಕಳೆಲ್ಲರೂ ವಿನಯವಂತರು; ನಾನು ಕೆಲವು ಸದ್ಗ್ರಂಥ ನಿರ್ಮಿತಿಯನ್ನೂ

ಮಾಡಿದ್ದೇನೆ. ನನಗೋ ಎಪ್ಪತ್ತಕ್ಕಿಂತ ಹೆಚ್ಚು ವರ್ಷಗಳಾದವು, ಇಹಲೋಕ ಸುಖಗಳಲ್ಲಿ ಬಯಕೆಯಿಲ್ಲ. ಈಗ ಮುಕ್ತಿಯನ್ನಲ್ಲದೆ ಮತ್ತೇನನ್ನೂ ಆಶಿಸುವುದಿಲ್ಲ' ಎಂದು ಧನ್ಯತಾವಾಕ್ಯಗಳನ್ನು* ನುಡಿದಾಗ ನಟರಾಜನು ಸಾಕ್ಷಾತ್ಕರಿಸಿದ. ಆಗ ಭಕ್ತಿಭರರಾಗಿ ದೀಕ್ಷಿತರು ಮೇಲಿನ ವಸಂತತಿಲಕವೃತ್ತದ ಪೂರ್ವಾರ್ಧವನ್ನು ಆಶುವಾಗಿ ಹೇಳಿದರು, "ಕನಕಸಭಾಮಧ್ಯದ ನಟರಾಜನ ಪಾದಪದ್ಮಗಳ ತರುಣಾರುಣಕಾಂತಿಯು ಸೂರ್ಯರೂಪದಿಂದ ನನ್ನ ಮನಸ್ಸಿನಲ್ಲಿ ಬೆಳಗುತ್ತಿದೆ." ಹೀಗೆ ಹೇಳುತ್ತಿದ್ದಂತೆಯೇ ಪರಮಪದವನ್ನೂ ಹೊಂದಿದರು.

ದೀಕ್ಷಿತರ ಮಕ್ಕಳು ಕೂಡಲೇ ಉತ್ತರಾರ್ಧವನ್ನು ಪೂರಣಮಾಡಿದರು, "ನಿಜವಾಗಿಯೂ ಮುಪ್ಪು-ಸಾವುಗಳೆಂಬ ಪಿಶಾಚಪ್ರೇತಗಳಿಂದ ತುಂಬಿದ ಸಂಸಾರದ ಮೋಹರಾತ್ರಿಯು ಮುಗಿದುಹೋಯಿತು"

ಹೀಗೆ ಒಂದು ಪರಿಪಕ್ವಜೀವನದ ಭರತವಾಕ್ಯ ಮುಗಿಯಿತು.

---

* ಈ ವಾಕ್ಯಗಳ ಮೂಲವಿಂತಿದೆ :

ಚಿದಂಬರಮಿದಂ ಪುರಂ ಪ್ರಥಿತಮೇವ ಪುಣ್ಯಸ್ಥಲಂ
ಸುತಾಶ್ಚ ವಿನಯೋಜ್ಜ್ವಲಾ ಸುಕೃತಯಶ್ಚ ಕಾಶ್ಚಿತ್ಕೃತಾಃ ।
ವಯಾಂಸಿ ಮಮ ಸಪ್ತತೇರುಪರಿ ನೈವ ಭೋಗೇ ಸ್ಪೃಹಾ
ನ ಕಿಂಚಿದಹಮರ್ಥಯೇ ಶಿವಪದಂ ದಿದೃಕ್ಷೇ ಪರಂ ॥

ಟಿಪ್ಪಣಿ:- ಈ ಸಂದರ್ಭದಲ್ಲಿಯೇ ದೀಕ್ಷಿತರು ತಮ್ಮ ಪುತ್ರರಿಗೆಲ್ಲಾ ಅವರವರ ಕೋರಿಕೆಯ ಮೇರೆಗೆ ಅನುಗ್ರಹ ಮಾಡಿದರೆಂದೂ, ಅದು ಇಂದಿಗೂ ಆ ವಂಶದ ಸಂತತಿಯಲ್ಲಿ ಸಫಲವಾಗುತ್ತಿದೆಯೆಂದೂ ಪ್ರತೀತಿಯುಂಟು.

—೫೪—

ವೇಣೀಭೂತೇಷು ಕೇಶೇಷ್ವತಿಘನಧಿಯಾ ದ್ರಷ್ಟುಮಾಗತ್ಯ ಕೇಕೀ
ಪಶ್ಚಾದಾರಭ್ಯ ಯೋದ್ಧುಂ ಪ್ರತಿಶಿಖಿಮನಸಾ ಕೇಷು ವಿಸ್ರಂಸಿತೇಷು।
ಭೂಯೋಧಮ್ಮಿಲ್ಲಿತೇಷು ಪ್ರಕಟಫಣಧಿಯಾ ನರ್ತನಾಯೋಜ್ಜೃಜೃಂಭೇಃ
ತನ್ನೃತ್ತಾಲೋಕನಾನ್ಮೇ ಪ್ರಿಯಸಖಿ ಮಮ ಭೂನ್ಮಂಡನಶ್ರೀವಿಲಂಬಃ॥

ಸುಮಾರು ಕ್ರಿ.ಶ. ಹದಿನೇಳನೆಯ ಶತಮಾನದ ಹರಹಿದಲ್ಲಿ ತಂಜಾವೂರು ಪ್ರಾಂತವು ಅನೇಕ ಮಹಾವಿದ್ವತ್ಕವಿಗಳಿಂದ ರಾರಾಜಿಸಿ ಅಭೂತಪೂರ್ವ ಪ್ರಖ್ಯಾತಿ ಪಡೆಯಿತು. ಅಪ್ಪಾನ್‌ದೀಕ್ಷಿತ, ರಂಗರಾಜಾಧ್ವರಿ, ಅಪ್ಪಯ್ಯದೀಕ್ಷಿತ, ಸಮರಪುಂಗವದೀಕ್ಷಿತ, ರಾಜಚೂಡಾಮಣಿದೀಕ್ಷಿತ, ನೀಲಕಂಠದೀಕ್ಷಿತ, ಗೋವಿಂದದೀಕ್ಷಿತ, ಯಜ್ಞನಾರಾಯಣದೀಕ್ಷಿತ, ರಾಮಭದ್ರದೀಕ್ಷಿತ, ವೇಂಕಟಮಖಿ ಮೊದಲಾದ ಅದ್ವೈತವಿದ್ಯಾಧುರಂಧರರಿಂದಲೂ, ಶ್ರೀವಿಜಯೀಂದ್ರ, ಸುಧೀಂದ್ರ, ತಾತಾಚಾರ್ಯರೇ ಮೊದಲಾದ ದ್ವೈತವಿಶಿಷ್ಟಾದ್ವೈತಧೀಮಂತರಿಂದಲೂ ಮಾರ್ಮೊಳಗಿತು. ಈ ಅವಧಿಯಲ್ಲೇ ರತ್ನಖೇಟಶ್ರೀನಿವಾಸದೀಕ್ಷಿತರು ಜಂಜಿಯ ಕೃಷ್ಣಮನಾಯಕನ ಆಸ್ಥಾನದಲ್ಲಿ ವಿದ್ಯಾಧಿಕಾರಿಯಾಗಿದ್ದರು. ಇವರು ಅಪ್ಪಯ್ಯದೀಕ್ಷಿತರಿಗೆ ಹೆಣ್ಣುಕೊಟ್ಟ ಮಾವ. ಮಹಾಕವಿಯೂ ಬಹುಶಾಸ್ತ್ರ-ಭಾಷಾಪಾರಾವಾರಕುಂಭೋದ್ಭವರೂ ಆಗಿದ್ದ ಶ್ರೀನಿವಾಸದೀಕ್ಷಿತರ ಪತ್ನಿ ಮಂಗಳಾಂಬೆಯೂ ಪ್ರೌಢಪಂಡಿತೆ, ಸರಸಕವಯಿತ್ರಿ. ವಿದಗ್ಧವಾಕ್ಯಾರ್ಥ ಸಭೆಗಳಿಗೆಲ್ಲಾ ಈಕೆಯೂ ಬಂದು ಪಾಲ್ಗೊಳ್ಳುತ್ತಿದ್ದಳು.

ಒಮ್ಮೆ ಈಕೆಗೆ ವಿದ್ವದ್ಗೋಷ್ಠಿಯಲ್ಲಿ ಪಾಲ್ಗೊಳ್ಳುವುದಕ್ಕೆ ವಿಳಂಬವಾಯಿತು. ಆಗ ಪತಿಯು ಕಾರಣ ಕೇಳಿದಾಗ ಕೂಡಲೇ ಮೇಲಿನ ಸ್ರಗ್ಧರಾವೃತ್ತದ ಪದ್ಯವನ್ನು ಪಠಿಸಿದಳು.

"ಈ ಸಭೆಗೆ ಬರಲೆಂದು ಅಣಿಯಾಗಲು ಜಡೆಹೆಣೆದುಕೊಂಡಾಗ ಅದನ್ನು ಕಂಡು ಕೃಷ್ಣಸರ್ಪವೆಂಬ ಭ್ರಾಂತಿಯಿಂದ ಹಿಡಿಯಲು ನವಿಲೊಂದು ಧಾವಿಸಿತು.

ನಾನಾಗ (ಅಂಚೆ) ಜಡೆಯನ್ನು ಸಡಲಿಸಿದಾಗ ತಲೆಗೂದಲನ್ನು (ಗಂಗೆದರಿಂದ) ಪ್ರತ್ಯರ್ಥಿಮಯೂರವೆಂದು ತಿಳಿದು ಆ ನವಿಲು ಕಾದಲು ಮುಂದಾಯಿತು. ಪುನಃ ಹೆಣೆದುಕೊಳ್ಳಲು ತಲೆಗೂದಲನ್ನು ಹರವಿದಾಗ ಕಾರ್ಮೋಡವೆಂಬ ಭ್ರಾಂತಿಯಿಂದ ಅದು ಕುಣಿಯಲಾರಂಭಿಸಿತು. ಆ ನರ್ತನವನ್ನು ನೋಡುತ್ತಾ ಅಲಂಕರಿಸಿಕೊಳ್ಳುವಷ್ಟರಲ್ಲಿ ತಡವಾಯಿತು !" ಈ ರೀತಿ ವಿಳಂಬಕ್ಕೆ ಅವಿಳಂಬ ಧಾರಾಧೋರಣೆಯಲ್ಲಿ ಉತ್ತರಿಸಿದದನ್ನು ಕೇಳಿ ಸಹೃದಯರು ತಡವೇ ಒಳೆಕ್ಕೇದು ಹರ್ಷಿಸಿರಬಹುದಲ್ಲವೇ !

—೫೫—

ವಿಪಶ್ಚಿತಾಮಪಶ್ಚಿಮೇ ವಿವಾದಕೇಲಿನಿಶ್ಚಲೇ
ಸಪತ್ನಜಿತ್ಯಯತ್ನತಸ್ತು ರತ್ನಖೇಟದೀಕ್ಷಿತೇ ।
ಬೃಹಸ್ಪತಿಃ ಕ್ವ ಜಲ್ಪತಿ ಕ್ವ ಸರ್ಪಶೀಹ ಸರ್ಪರಾಟ್ .
ಅಸಮ್ಮುಖಸ್ತು ಷಣ್ಮುಖಶ್ಚತುರ್ಮುಖೋಽಪಿ ದುರ್ಮುಖಃ ॥

ರತ್ನಖೇಟ ಶ್ರೀನಿವಾಸದೀಕ್ಷಿತರು ಕವಿ-ಅವಧಾನಿ ಮಾತ್ರವಲ್ಲದೆ ಮಹಾ ವಿದ್ವಾಂಸ. ಅದ್ವೈತಶಾಸ್ತ್ರವಕೌಸ್ತುಭ, ವಾದತಾರಾವಲೀ, ಮಧ್ವಧ್ವಂಸನ, ಬೌದ್ಧತಂತ್ರಮರ್ದನವೇ ಮೊದಲಾದ ಕೋಲಾಹಲಾತ್ಮಕ ಖಂಡನಮಂಡನ ಗ್ರಂಥಗಳನ್ನೂ ಬರೆದವರು. ಹೀಗಾಗಿ ಅವರಲ್ಲಿಗೆ ಪದೇಪದೇ ಪ್ರತಿವಾದಿ ಪಂಡಿತರು ಬಂದು (ಪರಾಜಿತರಾಗಿ) ಹೋಗುತ್ತಿದ್ದರು. ಕೆಲದಿನಗಳ ಬಳಿಕ ಸೋಲು ತಮಗೆ ಶಾಶ್ವತವೆಂಬ ಭೀತಿಯಿಂದಾಗಿ ಪ್ರತಿವಾದಿಗಳೇ ಬರುವುದನ್ನು ನಿಲ್ಲಿಸಿಯೂ ಬಿಟ್ಟರು. ಹೀಗಿರಲೊಮ್ಮೆ ದೀಕ್ಷಿತರ ಸರ್ವಂಕಷವಿದ್ಯಾವೈಭವವನ್ನರಿಯದೆ ಯಾರೋ ಕೆಲವರು ಪ್ರತಿಮಲ್ಲರು ತೀರ ಬೆಳಗಿನ ಜಾವದಲ್ಲಿಯೇ ಅವರ ಮನೆಯ ಬಾಗಿಲ ಬಳಿ ವಾದಭಿಕ್ಷೆಗಾಗಿ ಬಂದುನಿಂತರು. ಬ್ರಾಹ್ಮೀ ಮುಹೂರ್ತದಲ್ಲಿ ಸೆಗಣನೀರನ್ನು ಮನೆಯ ಮುಂದೆ ಹಾಕಿ ಸಾರಿಸಲು ಬಂದಿದ್ದ ಪುಟ್ಟ ಹುಡುಗಿ ಅಪ್ಪಮ್ಮ ಬಂದವರ ಇಂಗಿತವನ್ನರಿತು ತನ್ನ ತಂದೆಯ

ವೈದುಷ್ಯವನ್ನು ತಿಳಿಯಪಡಿಸಲು ಸಗಣನೀರನ್ನು 'ಲಪಕ್-ಲಪಕ್' ಎಂಬ ಸದ್ದಿನೊಂದಿಗೆ ಸಿಂಪಡಿಸುತ್ತಾ, ಆ ಲಘು-ಗುರುಗಳ ತಿಶ್ರಸಮಗತಿಗೆ ಸರಿಯಾಗಿ ಪಂಚಚಾಮರ ವೃತ್ತದಲ್ಲಿ ಶಬ್ದಾಲಂಕಾರ ಝೇಂಕಾರದ ಮೇಲಿನ ಪದ್ಯವನ್ನು ಆಶುವಾಗಿ ಹೇಳಿದಳು.

"ವಿದ್ವಾಂಸರ ಎದುರಿನಲ್ಲಿ ವಾದಲೀಲೆಯಲ್ಲಿ ನಿಶ್ಚಲನಾಗಿ, ಪ್ರತಿವಾದಿ ವಿದ್ವನ್ಮಲ್ಲರಿಂದ ಸೋಲನ್ನರಿಯದ ರತ್ನಖೇಟದೀಕ್ಷಿತನು ನಿಲ್ಲಲು ಅವನ ಬಳಿ ಬೃಹಸ್ಪತಿಯೂ ಹೆದರಿ ಬಾಯಿಗೆ ಬಂದಂತೆ ಹರಟಿ ಹುಚ್ಚಾಗುತ್ತಾನೆ, ಸಹಸ್ರ ಮುಖಗಳ ವ್ಯಾಕರಣನಿಧಿ ಆದಿಶೇಷನೂ ಅಂಜಿ ಬಿಲ ಸೇರುತ್ತಾನೆ, ಷಣ್ಮುಖನು ಅವನ ಸಂಮುಖದಲ್ಲಿ ನಿಲ್ಲಲಾರದವನಾಗುತ್ತಾನೆ, ಚತುರ್ಮುಖನಿಗೂ ಮುಖಕ್ಕೆ ಮಂಗಳಾರತಿಯಾಗಿ ಕಪ್ಪಿಟ್ಟವನಾಗುತ್ತಾನೆ !"

ಇಂಥ ವಿದುಷಿಯ ಪತಿಯಾದ ಅಪ್ಪಯ್ಯದೀಕ್ಷಿತರು ಜಂಬಿಗೆ ಒಮ್ಮೆ ಬಂದಾಗ ಚಮತ್ಕರಿಸಿದರಂತೆ ; "ಇಡಿಯ ದೇಶದಲ್ಲಿ ನಾನು ಏನೇ ಆಗಿದ್ದರೂ ಇಲ್ಲಿ ಮಾತ್ರ 'ಅಚ್ಚಾಭರ್ತಾ'—ಅಚ್ಚಿಯ ಗಂಡ ; ಅಷ್ಟೇ !"

—೫೬—

ತುರುಷ್ಕೋ ವಿಷ್ವಕ್ಷೀ ತುರಗಖುರಕುದ್ದಾಲದಲಿತಃ
ಕ್ಷಮಾಧೂಳೀಪಾಳೀಚುಲುಕಿತಚತುಸ್ಸಿಂಧುಸಲಿಲಃ !
ಸ್ವದೋರ್ವೀರ್ಯಾಧ್ಮಾತಪ್ರತಿಭಟವಧೂಟೀಪಟಕರಃ
ಪ್ರತಸ್ಥೇ ಕಾರ್ಣಾಟೀಂ ದಿಶಮಿತಿ ಹಿ ವಾರ್ತಾ ಸಮಜನಿ ॥

ರತ್ನಖೇಟಶ್ರೀನಿವಾಸದೀಕ್ಷಿತರಿಗೆ 'ರತ್ನ ಖೇಟ' ಎಂಬ ಬಿರುದು ಬರಲು ಕಾರಣ ಅವರು ಸಂಧ್ಯಾಕಾಲದಲ್ಲಿ ಉದಯಾಚಲ ಮತ್ತು ಅಸ್ತಾಚಲಗಳೆಂಬ ಯೋಧರು ತಾರಾನೀಕಾಂಗಳೆಂಬ ಹಿಡಿಮದ್ದು ಚೆಲ್ಲಾಡಿ ಸ್ವರತ್ನಗಳೆಂದು

ಸೂರ್ಯ–ಚಂದ್ರರೆಂಬ ರತ್ನಖೇಟ (ಗುರಾಣಿ)ಗಳನ್ನು ಹಿಡಿದಿರುವಂತ ಕಾಣುವುದೆಂದು ವರ್ಣಿಸಲು ಇದರ ಅಮೋಘ ಕಲ್ಪನೆಗೆ ಮೆಚ್ಚಿ ಸಹೃದಯರು ಹೀಗೆ ಗುರುತಿಸಿದ್ದೇ ಆಗಿದೆ. ಆರುಭಾಷೆಗಳಲ್ಲಿ ಕವಿತೆಕಟ್ಟುವ ಶತಾವಧಾನಿಯಾಗಿ, ಷಡ್ದರ್ಶನಸಾರ್ವಭೌಮನೆನಿಸಿ,ಅದ್ವೈತವಿದ್ಯಾಧುರಂಧರನಾಗಿ;ಶಿತಿಕಂಠವಿಜಯ, ಭಾವನಾಪುರುಷೋತ್ತಮಾದಿ ಕಾವ್ಯನಾಟಕಗಳನ್ನು ಬರೆದ ದೀಕ್ಷಿತರಿಗೆ ತಕ್ಕ ಪತ್ನಿ ಮಂಗಳಾಂಬೆ. ಮಗ ರಾಜಚೂಡಾಮಣಿದೀಕ್ಷಿತ ರುಕ್ಮಿಣೀ ಪರಿಣಯ ಮಹಾಕಾವ್ಯದ ಕರ್ತೃ. ಮಗಳು ಅಚ್ಚಮ್ಮನೂ ವಿದುಷಿ.

ಒಮ್ಮೆ ಮನೆಯೊಳಗೆ ದೀಕ್ಷಿತರು ನಿತ್ಯಾಗ್ನಿಹೋತ್ರದ ಬಳಿಕ ಆಪ್ತರೊಡನೆ ಸಲ್ಲಾಪಿಸುವಾಗ ಬೀದಿಯಲ್ಲೇನೋ ಕಲರವ ಕೇಳಿಸಿತಂತೆ. ಆಗ ಮಗಳಿಗೆ 'ಅದೇನು ನೋಡಿ ಬಾ' ಎನ್ನಲು ಪುಟ್ಟಬಾಲೆ ಅಚ್ಚಮ್ಮ ಹೋಗಿ ನೋಡಿ ಬಂದು ಆಶುಕವಿತಾರೂಪದಲ್ಲಿ ಹೀಗೆ ವರ್ಣಿಸಿದಳು.

"ಧನಾಕಾಂಕ್ಷೆಯಿಂದ ಉತ್ತರದ ಮುಸಲ್ಮಾನ ರಾಜನು ತನ್ನ ಅಶ್ವಸೇನೆಯಿಂದಾಗಿ ಭೂಮಿಯನ್ನೆಲ್ಲಾ ಧೂಳೆಬ್ಬಿಸಿ, ಸಾಗರಜಲವನ್ನು ಕೆಸರುಮಾಡಿ, ಬೊಗಸೆಯಷ್ಟು ನೀರಿಗೆ ಅದನ್ನು ಬತ್ತಿಸಿ, ತನ್ನ ಭುಜಬಲಲೀಲೆಯಿಂದ ವೈರಿಕಾಂತೆಯರ ಸೌಭಾಗ್ಯವನ್ನಳಿಸಿ ಈಗ ದಕ್ಷಿಣದಿಕ್ಕಿನತ್ತ ಬರುತ್ತಿದ್ದಾನೆಂಬ ಸುದ್ದಿಯ ಕೋಲಾಹಲ ಇದಷ್ಟೇ!" ಅಸ್ಖಲಿತಶಿಖರಿಣೀವೃತ್ತದ ಈ ಪದ್ಯ ಕೇಳಿ ಯವನಾಕ್ರಾಂತಿಯ ಭೀತಿಯನ್ನೂ ದೀಕ್ಷಿತರು ಮರೆತು ಹರ್ಷಿಸಿರಬಹುದಲ್ಲವೇ!

—೫೭—

ಅಪ್ಪದೀಕ್ಷಿತ! ಕಿಮಿತ್ಯತಿಸ್ತುತಿಂ ವರ್ಣಯಾಮಿ ಭವತೋ ವದಾನ್ಯತಾಂ।
ಸೋಽಪಿ ಕಲ್ಪತರುರರ್ಥಸಿದ್ಧಯೇ ತ್ವದ್ಗಿರಾಮವಸರಂ ಪ್ರತೀಕ್ಷತೇ ॥

ತಂಜಾವೂರಿನ ರಾಜ ಅಚ್ಯುತನಾಯಕನಿಗೂ, ಆತನ ಪುತ್ರ ರಘುನಾಥ ನಾಯಕನಿಗೂ ಮಂತ್ರಿಯಾಗಿ, ಗುರುವಾಗಿ : ಸುವರ್ಣಯುಗವನ್ನೇ ಉಂಟು

ಮಾಡಲು ಕಾರಣರಾದ ಶ್ರೀ ಗೋವಿಂದದೀಕ್ಷಿತರು ಅವಿರಳಾಗ್ನಿಹೋತ್ರಿ, ಸಕಲಯಜ್ಞಕರ್ತೃ, ಪೂರ್ವೋತ್ತರಮೀಮಾಂಸಾನಿಧಿ, ಸರ್ವಶಾಸ್ತ್ರವೇತ್ತ, ರಾಜನೀತಿನಿಪುಣ, ಸರಸಕವಿ ಮತ್ತು ಎಲ್ಲಕ್ಕೂ ಮಿಗಿಲಾಗಿ ಮಹಾಮಾನವತೆಯುಳ್ಳ ದಾನಶೀಲಿ, ತಪಸ್ವೀವಿನ್ನರಾದ ಜ್ಞಾನಿ. ರಾಜಕಾರ್ಯಗಳಲ್ಲಿದ್ದರೂ ತಮ್ಮ ವಿಪ್ರಸಹಜ ಷಟ್ಕರ್ಮಾಧಿಕಾರವನ್ನು ಯಥಾವಿಧಿಯಾಗಿ ನಡಸಿಕೊಂಡು ಬಂದವರು. ಇವರ ಪುತ್ರರಾದ ಯಜ್ಞನಾರಾಯಣದೀಕ್ಷಿತ ಮತ್ತು ವೇಂಕಟಮಖಿ (ಮಹಾ ಸಂಗೀತಜ್ಞ)ಯರೂ ವಿದ್ವಾಂಸರೇ. ಅಪ್ಪಯ್ಯದೀಕ್ಷಿತರು ಇವರ ಆಪ್ತಮಿತ್ರರು, ಗುರುಕಲ್ಪರು.

ಒಮ್ಮೆ ಗೋವಿಂದದೀಕ್ಷಿತರು (ಇವರು ಕನ್ನಡನಾಡಿನ ಹೊಯ್ಸಳ ಕರ್ನಾಟಕ ಬ್ರಾಹ್ಮಣವರ್ಗಕ್ಕೆ ಸೇರಿದವರು) ಶಿಷ್ಯರೊಡನೆ ತೀರ್ಥಯಾತ್ರೆಯನ್ನು ಮಾಡುತ್ತಾ ಮಧ್ಯಾರ್ಜುನಕ್ಷೇತ್ರಕ್ಕೆ ಬಂದಾಗ ಅಮಲಾನಂದಯತೀಂದ್ರರ 'ಕಲ್ಪತರು'ವಿನ ಪಾಠವನ್ನು ಆರಂಭಿಸಬೇಕಾಗಿ ಬಂದಿತು. ಆ ಗ್ರಂಥದ ತೊಡಕುಗಳನ್ನು ಕಷ್ಟಪಟ್ಟು ಬಿಡಿಸುವಾಗ ಆ ಹೊತ್ತಿಗೆ ಅಲ್ಲಿ ಬಂದ ಅಪ್ಪಯ್ಯದೀಕ್ಷಿತರಿಂದಾಗಿ ಸಂದೇಹಗಳು ಸರಾಗವಾಗಿ ನಿವಾರಣೆಯಾದವು. ಆಗ ಗೋವಿಂದದೀಕ್ಷಿತರು ಮೇಲ್ಕಂಡ ರಥೋದ್ಧತಾವೃತ್ತ ಪದ್ಯವನ್ನು ಆಶುವಾಗಿ ಹೇಳಿದರು.

"ಅಪ್ಪಯ್ಯದೀಕ್ಷಿತರೇ ! ನಿಮ್ಮ ಉದಾರತೆಯನ್ನು ಏನೆಂದು ಬಣ್ಣಿಸಲಿ ? ಕಲ್ಪತರುವು (ಕಲ್ಪವೃಕ್ಷ ಅಥವಾ ಕಲ್ಪತರು ಗ್ರಂಥ) ಅರ್ಥಸಿದ್ಧಿಗಾಗಿ (ಧನ ಪಡೆಯಲು ; ಅರ್ಥಸ್ಪಷ್ಟತೆಗಾಗಿ) ನಿಮ್ಮ ನುಡಿಗಳನ್ನು ಬಯಸುತ್ತದೆ." ಈ ರಮಣೀಯ ಶ್ಲೋಕಸಹಿತ ಮುಂದೆ ಅಪ್ಪಯ್ಯದೀಕ್ಷಿತರನ್ನು ಕಲ್ಪತರು ವ್ಯಾಖ್ಯಾನವಾದ "ಪರಿಮಲ"ವನ್ನು ಬರೆಯಲು ಪ್ರೇರಿಸಿತು.

---

ಟಿಪ್ಪಣಿ :- ಶ್ರೀ ಶಂಕರಭಗವತ್ಪಾದರು ಬರೆದ ಶಾರೀರಕಭಾಷ್ಯಕ್ಕೆ ವಾಚಸ್ಪತಿಮಿಶ್ರರ ಟೀಕೆಯೇ ಭಾಮತಿ. ಇದಕ್ಕೆ ಅಮಲಾನಂದರ ಕಲ್ಪತರು ವ್ಯಾಖ್ಯೆ. ಅಪ್ಪಯ್ಯದೀಕ್ಷಿತರ "ಪರಿಮಲ"ವು ಇದಕ್ಕೆ ವ್ಯಾಖ್ಯಾನ [illegible]

—೫೮—

ಕತಿ ಕತಿ ನ ಕುಸತ್ಪತಯಃ ಕಿಂ ತೇ ತು ಕದಾಪಿ ನಾಯಕಾಯಂತೇ ।
ಕೌ ಪಾದಪಾಸ್ತು ಸಂತ್ಯಪಿ ಕಿಂ ತೇ ಸಂತಾನಪಾದಪಾಯಂತೇ ॥

ಹದಿನೇಳನೆಯ ಶತಾಬ್ದದಲ್ಲಿ ತಂಜಾವೂರು ಸೀಮೆಯಲ್ಲಿ ರಾಜನಾಗಿದ್ದ ರಘುನಾಥನಾಯಕನು ಅಪರ ಭೋಜನಂತೆ, ಅಭಿನವ ಶ್ರೀ ಕೃಷ್ಣದೇವರಾಯನಂತೆ ಸಾಹಿತೀಸಮರಾಂಗಣಸಮ್ರಾಜ. ಇವನ ಕಾಲದಲ್ಲಿ ದಕ್ಷಿಣಾಪಥವು ಶಾಂತಿ, ಸಂಪತ್ತಿಗಳಿಂದ ಸಮೃದ್ಧಿ ಪಡೆದು ಸಂಗೀತ, ಸಾಹಿತ್ಯ, ಕಲೆಗಳಲ್ಲಿ ಅಸಮಾನಸಿದ್ಧಿ ಹೊಂದಿತು. ಸ್ವಯಂ ವೀರಯೋಧನೂ, ವಿದ್ವತ್ಕವಿಯೂ ಆಗಿದ್ದ ಈತನ ಆಸ್ಥಾನದಲ್ಲಿ ಯಜ್ಞನಾರಾಯಣದೀಕ್ಷಿತ, ರಾಜಚೂಡಾಮಣಿ ದೀಕ್ಷಿತ, ಸಮರಪುಂಗವದೀಕ್ಷಿತ, ವೇಂಕಟಮುಖಿ, ಚೇಮಕೂರಿ ವೇಂಕಟಕವಿಯೇ ಮೊದಲಾದ ಕವಿಪಂಡಿತರಲ್ಲದೆ ರಾಮಭದ್ರಾಂಬೆ, ಮಧುರವಾಣಿಯೇ ಮೊದಲಾದ ಕವಯಿತ್ರಿಯರೂ ಇದ್ದರು. ಗೋವಿಂದದೀಕ್ಷಿತರೀತನ ಮಂತ್ರಿ ಹಾಗೂ ವಿದ್ಯಾಗುರು.

ವೇಶ್ಯಾವಂಶದಿಂದ ಬಂದ ಅಪೂರ್ವವಿದುಷಿ ಶುಕವಾಣಿ. ಈಕೆಯನ್ನು ಸಂಗ್ರಹಿಸಿ ಗೌರವಿಸಿದ ರಘುನಾಥನಾಯಕ ಇವಳ ಕಾವ್ಯ-ಸಂಗೀತ ವಿದ್ವತ್ತಿಗೆ ಮೆಚ್ಚಿ 'ಮಧುರವಾಣಿ' ಎಂಬ ಬಿರುದನ್ನು ಕೊಟ್ಟು ಕನಕಾಭಿಷೇಕ ಮಾಡಿದ. ಗೋವಿಂದದೀಕ್ಷಿತ, ವೇಂಕಟಮುಖಿ ಹಾಗೂ ಸ್ವಯಂ ರಘುನಾಥನಾಯಕನಿಂದಲೇ ಸಕಲವಿದ್ಯಾಪ್ರಾವೀಣ್ಯವನ್ನು ಪಡೆದ ಈಕೆ ಅರ್ಧಘಳಿಗೆಯಲ್ಲಿ ನೂರು ಶ್ಲೋಕಗಳನ್ನು ಕವನಿಸಬಲ್ಲ, ವೀಣೆನುಡಿಸುತ್ತಲೇ ಶಾಸ್ತ್ರಾರ್ಥ ನಡೆಸಬಲ್ಲ, ಶತಾವಧಾನ ಮಾಡುತ್ತಾ ಆರು ಭಾಷೆಗಳನ್ನು ಬಳಸಬಲ್ಲ ಅಸಮಾನ ಸಾಹಿತೀಮೂರ್ತಿ.

ಒಮ್ಮೆ ಸಭೆಯಲ್ಲಿ "ಕಿಂ ತೇ ಸಂತಾನಪಾದಪಾಯಂತೇ" ಎಂಬ ಸಮಸ್ಯೆಯನ್ನೊಡ್ಡಿ ಪರಿಹಾರವನ್ನು ಈ ಸಾಲಿನಲ್ಲಿ ಬಂದಿರುವ 'ಕ-ತ-ಸ-ನ-ಪ-ದ-ಯ'

ಎಂಬ ಏಳೇ ವರ್ಣಗಳನ್ನು ಬಳಸಿ ಸಪ್ತಾಕ್ಷರೀಪದ್ಯವಾಗಿ ಹೇಳಬೇಕೆಂದು ನಿರ್ಬಂಧಿಸಿದಾಗ ಒಡನೆಯೇ ಅಸಾಧಾರಣಾಶುಧಾಟಿಯಿಂದ ಮಧುರವಾಣಿಯು ;

"ಎಷ್ಟೆಷ್ಟು ಜನ ಭೂಪಾಲಕೋತ್ತಮರು ಇಲ್ಲಿಲ್ಲ ? ಆದರೆ ಅವರಾರೂ, ಎಂದಿಗೂ ನಾಯಕ(ರಘುನಾಥ)ರಾಗಲು ಸಾಧ್ಯವಿಲ್ಲ ! ಭೂಮಿಯಲ್ಲಿ ಎಷ್ಟು ವೃಕ್ಷಗಳಿದ್ದರೂ ಅವು ದಿವ್ಯಲೋಕತರುವಾದ ಸಂತಾನವೃಕ್ಷವಾಗಲು ಸಾಧ್ಯವೇ ?" ಎಂದು ಇನಿಯನನ್ನೇ ಪ್ರಶಂಸಿಸಿ ಪೂರಣನಡೆಸಿದಳು. ಇಂಥ ವಾಗೀಶ್ವರಿಯರು ಇದ್ದ ಪ್ರಾಚೀನಭಾರತವನ್ನು ಸ್ತ್ರೀವ್ಯಾಸಂಗವಿರೋಧಿ ಎನ್ನುವ ಆಕ್ಷೇಪಣೆ ಅವಿಚಾರಿತವಲ್ಲವೇ !

—೫೯—

ಕಲಾರತ್ನಂ ಗೀತಂ ಗಗನತಲರತ್ನಂ ದಿನಮಣಿಃ
ಸಭಾರತ್ನಂ ವಿದ್ವಾನ್ ಶ್ರವಣಪುಟರತ್ನಂ ಹರಿಕಥಾ ।
ನಿಶಾರತ್ನಂ ಚಂದ್ರಃ ಶಯನತಲರತ್ನಂ ಶಶಿಮುಖೀ
ಮಹೀರತ್ನಂ ಶ್ರೀಮಾನ್ ಜಯತಿ ರಘುನಾಥೋ ನೃಪವರಃ ॥

ತಂಜಾವೂರಿನ ರಘುನಾಥನಾಯಕನ ಪತ್ನಿ ರಾಮಭದ್ರಾಂಬೆಯೂ ಪತಿಯಂತೆಯೇ ಕವಿತಾನಿಪುಣೆ. ಈಕೆಯ ಸಖಿಯಾಗಿದ್ದ ಮಧುರವಾಣಿ ತನ್ನ ಒಡೆಯ ರಘುನಾಥನಾಯಕನ ತೆಲುಗುರಾಮಾಭ್ಯುದಯವನ್ನು ಆಧರಿಸಿ ಸಂಸ್ಕೃತದಲ್ಲಿ ಅತಿಪ್ರೌಢವಾದ 'ರಾಮಾಯಣ ತಿಲಕ' ಮಹಾಕಾವ್ಯವನ್ನು ರಚಿಸಿದ್ದಾಳೆ. ಆದರೆ ರಾಮಭದ್ರಾಂಬೆಯು ವಿಜಯನಗರದ ಗಂಗಾದೇವಿಯಂತೆಯೇ ತನ್ನ ಮಹಾಕಾವ್ಯಕ್ಕೆ ನಿಜನಾಥನಾದ ರಘುನಾಥನನ್ನೇ ನಾಯಕನನ್ನಾಗಿಸಿ ರಘುನಾಥಾಭ್ಯುದಯವೆಂಬ ಗ್ರಂಥವನ್ನು ರಚಿಸಿದಳು. ತೆಲುಗು ಕವಿ ರಾಳಯ್ಯನ ಶಿಷ್ಯೆಯಾಗಿ ತೆಲುಗಿನಲ್ಲೂ ಕವಿತೆಯನ್ನು ಸೃಜಿಸಿದ್ದಾಳೆ.

ರಾಮಭದ್ರಾಂಬೆಯು ಅಷ್ಟಭಾಷಾಕವಯಿತ್ರಿ, ಶತಾವಧಾನಿನಿ; ಚಿತ್ರ-ಗರ್ಭ-ಬಂಧ-ಆಶು ಎಂಬ (ಅಥವಾ ಮಧುರ-ಲಲಿತ-ವಿಸ್ತರ-ಆಶು) ಚತುರ್ವಿಧ ಕವಿತಾರಚನೆಯಲ್ಲಿ ಪರಿಣತೆ. ಈಕೆಯ ಕಾವ್ಯವು ತನ್ನ ಪತಿಯ ಒಂದೇ ದಿನದ ಚರ್ಯೆಯ ಘಟನೆಗಳನ್ನೊಳಗೊಂಡ ಅಪೂರ್ವ ಸಂವಿಧಾನ.

ಒಮ್ಮೆ ಸಭೆಯಲ್ಲಿ ಆಶುಕವಿತೆಯ ಪ್ರಸ್ತಾವ ಬಂದಾಗ ರತ್ನ ಶಬ್ದವನ್ನು ಏಳುಬಾರಿ ಬಳಸಿ ಶಿಖರಿಣೀವೃತ್ತದಲ್ಲಿ ನಾಲ್ಕು ಕಡೆಗಳಲ್ಲಿ ನಿಲುಗಡೆ ಬರುವಂತೆ ಪಾದಗಳನ್ನು ಹೊಂದಿಸಿ ಅತ್ಯಾಶುವಾಗಿ ಪದ್ಯರಚಿಸಬೇಕೆಂದು ನಿಯಮವಿರಿಸಿದಾಗ ಪ್ರಾಶ್ನಿಕರ ಮಾತು ಮುಗಿಯುವ ಮುನ್ನವೇ ಅಖಂಡವಾಗಿ ಈ ಮೇಲಣ ಪದ್ಯವನ್ನು ಹೇಳಿದಳಂತೆ ರಾಮಭದ್ರಾಂಬೆ.

“ಕಲಾರತ್ನವೆಂದರೆ ಗಾಯನವೇ. ಆಗಸದಲ್ಲಿ ರತ್ನವೆಂದರೆ ರವಿಯೇ. ಸಭಾರತ್ನವೆಂದರೆ ಪಂಡಿತನೇ. ಕಿವಿಗೆ ರತ್ನವು ಶ್ರೀಹರಿಕೀರ್ತನೆಯೇ. ಇರುಳಿನಲ್ಲಿ ರತ್ನವೆಂದರೆ ಶಶಿಯೇ. ಸೆಜ್ಜೆಯಲ್ಲಿ ರತ್ನವು ಸುಂದರಿಯೇ. ಇನ್ನು ಧರಾತಲದಲ್ಲಿ ರತ್ನವೆಂದರೆ ಶ್ರೀರಘುನಾಥನಾಯಕನೇ.”

ಇಂಥ ಕವಿತೆಯನ್ನು ಅತಿವೇಗವಾಗಿ ಹೇಳಬಲ್ಲ ರಾಮಭದ್ರಾಂಬೆ ಘಳಿಗೆಯೊಂದರಲ್ಲಿ (ಇಪ್ಪತ್ನಾಲ್ಕು ನಿಮಿಷಕ್ಕೆ) ನೂರುಶ್ಲೋಕಗಳನ್ನು ನುಡಿಯುತ್ತಿದ್ದಳೆಂದರೆ ಆಶ್ಚರ್ಯವೇನಿಲ್ಲ !

—೬೦—

ಕ್ಷುತ್ತೃಡಾಶಾ ಇತಿ ಖ್ಯಾತಾ ಭಾರ್ಯಾಸ್ತಿಸ್ರಃ ಪ್ರಭೋ ! ಮಮ ।
ತಾಸ್ವಿದಂ ಹಿ ಕನಿಷ್ಠಾಯಾಃ ಪ್ರಿಯಾಯಾ ನರ್ಮಚೇಷ್ಟಿತಂ ॥

ಮಹಾಕವಿ ನೀಲಕಂಠದೀಕ್ಷಿತನು ಸಂಸ್ಕೃತಸಾಹಿತ್ಯದ ಧ್ರುವತಾರೆ. ಕ್ರಿ. ಶ. ಹದಿನೇಳನೆಯ ಶತಾಬ್ದದಲ್ಲಿದ್ದ ಈ ಸರಸಕವಿ ಶ್ರೀಮದಪ್ಪಯ್ಯ

ದೀಕ್ಷಿತರ ತಮ್ಮನ ಮೊಮ್ಮಗ. ವಕ್ರೋಕ್ತಿನಿಪುಣನೂ, ಹಾಸ್ಯರಸದಲ್ಲಿ ಅದ್ವಿತೀಯನೂ ಆದ ಈ ಶಿವಭಕ್ತನ ನೀಲಕಂಠವಿಜಯಚಂಪೂ, ಶಿವಲೀಲಾರ್ಣವ, ಗಂಗಾವತರಣ, ನಲಚರಿತ್ರನಾಟಕ ಮೊದಲಾದ ದೀರ್ಘಕೃತಿಗಳೂ, ಕಲಿವಿಡಂಬನ, ಅನ್ಯಾಪದೇಶಶತಕ, ಸಭಾರಂಜನಶತಕ, ವೈರಾಗ್ಯಶತಕ, ಶಾಂತಿವಿಲಾಸಾದಿಗಳೂ ತಮ್ಮ ಅನನ್ಯ ಸ್ವಾರಸ್ಯದಿಂದ ಚಿರಕಾಲ ಉಪಾದೇಯವಾಗಿವೆ.

ಈತನನ್ನು ಪಾಂಡ್ಯಭೂಪತಿಯೊಮ್ಮೆ ಘನವಾಗಿ ಸನ್ಮಾನಿಸಿದ. ಆ ಬಳಿಕ ದೊಡ್ಡ ಅನ್ನಸಂತರ್ಪಣ ಸಮಾರಾಧನೆಯಿದ್ದಿತು. ನೀಲಕಂಠದೀಕ್ಷಿತನೂ ಊಟ ಮುಗಿಸಿ ಹೊರಬರುವಾಗ ನಿರ್ಗಮನದ್ವಾರದ ಬಳಿಯಲ್ಲಿ ಸದಕ್ಷಿಣವಾಗಿ ತಾಂಬೂಲವನ್ನು ಕೊಡುತ್ತಿದ್ದರು. ದಕ್ಷಿಣೆಗಾಗಿ ಬ್ರಾಹ್ಮಣರ ನೂಕುನುಗ್ಗಲು ಹೆಚ್ಚಾಗಿತ್ತು. ದೀಕ್ಷಿತನೂ ಆ ಸ್ಪರ್ಧೆಗೆ ಸಿಲುಕಿ ಕಡೆಗೆ ಜಾರಿಬಿದ್ದ. ಇದನ್ನು ಕಂಡ ರಾಜ "ಇದೇನೀ ಅವಸ್ಥೆ"ಯೆಂದು ದರಹಾಸದಿಂದ ಕೇಳಿದ. ಆಗ ಸಮಯಸ್ಫೂರ್ತಿಯಿಂದ ದೀಕ್ಷಿತನು ತನ್ನ ಸ್ವಭಾವಸಿದ್ಧ ಹಾಸ್ಯಧೋರಣೆಗೆ ಅನುಸಾರವಾಗಿ ಮೇಲಿನ ಶ್ಲೋಕವನ್ನು ಆಶುವಾಗಿ ನುಡಿದ.

"ಹಸಿವು, ನೀರಡಿಕೆ ಮತ್ತು ಆಶೆಯೆಂದು ನನಗೆ ಮೂವರು ಪತ್ನಿಯರು. ಮಹಾರಾಜ ! ಅವರಲ್ಲಿ ಹಿರಿಯವಳೂ, ಮುದ್ದಿನವಳೂ ಆದವಳ (ಆಶೆಯ) ಶೃಂಗಾರಚೇಷ್ಟೆಯೇ ಇದು !!"

ಅತ್ಯಂತ ಮನೋಜ್ಞವಾದ ಈ ಚಾಟುಪದ್ಯವು ಈ ರೀತಿ ಕವಿಯು ಜಾರಿ ಬೀಳದಿದ್ದರೆ ಬರುತ್ತಿರಲಿಲ್ಲವೆಂದು ಇಂದೂ ನಾವು ಆತನ ತೃತೀಯಪತ್ನಿಯನ್ನು ಅಭಿನಂದಿಸಬೇಕು !

—೬೧—

ದಿಲ್ಲೀಶ್ವರೋ ವಾ ಜಗದೀಶ್ವರೋ ವಾ ಮನೋರಥಾನ್ ಪೂರಯಿತುಂ ಸಮರ್ಥಃ।
ಅನ್ಯೈರ್ನೃಪಾಲೈಃ ಪರಿದೀಯಮಾನಂ ಶಾಕಾಯ ವಾ ಸ್ಯಾಲ್ಲವಣಾಯ ವಾ ಸ್ಯಾತ್॥

ಕ್ರಿ. ಶ. ಹದಿನೇಳನೆಯ ಶತಮಾನದ ಜಗನ್ನಾಥಪಂಡಿತ ಸಂಸ್ಕೃತ ಲೋಕದ ಜಾಜ್ವಲ್ಯಮಾನರತ್ನ. ಅಲಂಕಾರಶಾಸ್ತ್ರದ ಅಂತಿಮ ದಿಗ್ಗಜ. ಪ್ರೌಢಪಾಂಡಿತ್ಯದ, ಗಾಢಬಂಧದ, ಸರಸಸತ್ತ್ವದ ಕವಿತೆಯ ಅನರ್ಗಲ ನಿರ್ಮಿತಿಯಲ್ಲಿ ಕೊನೆಕೊನೆಯ ಶಿಖರ. ವಿದ್ಯಾಪ್ರತಿಭೆಗಳಿಗೆ ಸರಿಮಿಗಿಲಾದ ಪಾಂಡಿತೀವೀರದಲ್ಲಿ ಇವನನ್ನು ಮೀರಿಸುವವರು ಹಲವರಿಲ್ಲ. ಮೂಲತಃ ಆಂಧ್ರೀಯನಾದರೂ ಕಾಶಿಯಲ್ಲಿ ಸ್ವಪ್ರಕರ್ಷವನ್ನು ಮೆರೆದು ದಿಲ್ಲೀವಲ್ಲಭನ ಪಾಣಿಪಲ್ಲವಗಳಿಂದ ಪರಿಚರ್ಯೆಯನ್ನು ಪಡೆದು ಪಂಡಿತರಾಜರಾಜತಿಲಕನೆಂಬ ಬಿರುದಿನಿಂದ ಆಸೇತುಶೀತಾಚಲದವರೆಗೂ ಹಬ್ಬಿದ ಭಾರತದಲ್ಲಿ ವಾಕ್ಸಿಂವ ಆಚಾರ್ಯಪದವನ್ನು ಪಡೆದವರಲ್ಲಿ ತನ್ನನ್ನುಳಿದು ಅನ್ಯನಾರ ಧನ್ಯ ಮತ್ತಾರೆಂದು ಹೆಮ್ಮೆಯಿಂದ ಡಿಂಡಿಮರಣನ ಮಾಡಿದ.

ಇಂಥ ಮೇಧಾವಿಯನ್ನು ತಮ್ಮ ತಮ್ಮ ಆಸ್ಥಾನಗಳಿಗೆ ಕರೆಯಿಸಿ ಮರ್ಯಾದೆಮಾಡಿ ತನ್ಮೂಲಕ ತಾವೂ ಖ್ಯಾತರಾಗಿ ಅವನ ಕವಿತೆಯಲ್ಲಿ ನೆಲೆಸಿ ಅಜರಾಮರರಾಗಬೇಕೆಂಬ ಚಪಲವು ಆಗಿನ ಅನೇಕ ಹಿರಿಯ–ಕಿರಿಯ ರಾಜರುಗಳಲ್ಲಿತ್ತು. ಇವರ ಅಹಮಹಮಿಕೆಯ ಪ್ರಾರ್ಥನೆಗೆ ಜಗನ್ನಾಥನ ಪ್ರತ್ಯುತ್ತರ ಇಷ್ಟೇ ಪರುಷವಾದದ್ದು. ಮೇಲಿನ ಪದ್ಯ ಅಂಥ ದರ್ಪೋಕ್ತಿಯೇ ಆದರೂ ವಿದಗ್ಧ ಭಂಗೀಭಣಿತಿ.

"ದಿಲ್ಲೀಶ್ವರನೋ (ಶಾಹ್‌ಜಹಾನ್) ಅಥವಾ ಜಗದೀಶ್ವರ*ನೋ (ಪರಮಾತ್ಮ) ನನ್ನ ಬಯಕೆಗಳನ್ನು ಪೂರೈಸಲು ಸಮರ್ಥರಷ್ಟೇ. ಅವರಲ್ಲದೆ ಬೇರೆ ದೊರೆಗಳು ಕೊಡುವುದು ನನ್ನ ಉಪ್ಪು–ತರಕಾರಿಗಳ ವೆಚ್ಚಕಷ್ಟೇ ಸಾಕಾದೀತು!"

---

* [illegible]

ಇಂಥ ಆತ್ಮಪ್ರತ್ಯಯದ ಜಗನ್ನಾಥ ಔರಂಗಜೇಬನ ಅನಾದರದಿಂದಾಗಿ ಕಾಮರೂಪದ ದೊರೆ ಪ್ರಾಣನಾರಾಯಣನಂಥವರನ್ನೂ "ಪ್ರಾಣಾಭರಣ"ವೆಂದು ಕೊಂಡಾಡಿ ಜೀವಿಸಬೇಕಾಗಿ ಬಂದದ್ದು ವಿಧಿಯ ಕ್ರೂರವಿಡಂಬನೆ.

—೬೨—

ಹೃದಿ ತರಸಾ ವಿದಿತರಸಾ ತದಿತರಸಾಹಿತ್ಯವಾಙ್ನ ಮೇ ಲಗತಿ ।
ಕವಿಲೋಕೇ ನ ವಿಲೋಕೇ ಭುವಿ ಲೋಕೇಶಸ್ಯ ಶಾಹಜೇರುಪಮಾಂ ॥

ಮಹಾನುಭಾವರಾದ ಗೋವಿಂದದೀಕ್ಷಿತರ ಮರಿಮಗ ವಾಂಛೇಶ್ವರ (ದೀಕ್ಷಿತರ ದೌಹಿತ್ರಿಯ ಮಗ) ಅಥವಾ ಕುಟ್ಟಿಕವಿ. ಈತನಿಗೆ ಕುಟ್ಟಿಕವಿ (ಘಟ್ಟಿಕವಿ) ಎಂಬ ಹೆಸರು ಬರಲು ಸೊಗಸಾದ ಕಥೆಯೊಂದುಂಟು. 18ನೆಯ ಶತಮಾನದಲ್ಲಿ ತಂಜಾವೂರನ್ನಾಳಿದ ಭೋನ್ಸಲೇ ಮನೆತನದ ರಾಜರಲ್ಲಿ ಶಹಾಜಿ ತುಂಬ ಪ್ರಖ್ಯಾತ. ಈತ ಸ್ವಯಂ ಕವಿ-ಪಂಡಿತ. ತಂಜಾವೂರಿನ ಬಳಿಯ ಕಾವೇರೀತೀರದ ತಿರುವೀಶನಲ್ಲೂರ್ ಈತನ ಪೋಷಣೆಯಿಂದಾಗಿ ವಿದ್ವಾಂಸರ ದೊಡ್ಡ ಅಗ್ರಹಾರವಾಗಿ ಬೆಳೆಯಿತು. ಇಲ್ಲಿಯೇ ವಾಂಛೇಶ್ವರನೂ ಬೆಳೆದ. ತಂದೆಯೊಡಗೂಡಿ ಶಹಾಜಿಯ ಪರಿವಾರದಲ್ಲಿ ಸೇರಿ ಒಮ್ಮೆ ಇವನು ಮಧುರೆಗೆ ಯಾತ್ರೆಮಾಡಿದ. ಮೀನಾಕ್ಷಿಯನ್ನು ಕಂಡು ಮಹಾರಾಜನು ಭಕ್ತಿನಿರ್ಭರನಾಗಿ ಸ್ತುತಿಸಿದ; "ಪುರಂ ಮಧುರಂ ಗಿರಿ ಮಧುರಾಃ ಗಿರಿಮಧುರಾಃ ಧರನಿತಂಬಭಾರಾಢ್ಯಂ । ಸ್ಮಿತಲಹರೀ ನೀಲಕಚಂ ಬಾಲಕಚಂದ್ರಾಂಕಿತಂ ತೇಜಃ ॥" ಎಂದು. ತಂದೆಯೊಡನೆ ಅಲ್ಲಿಯೇ ಇದ್ದ ಚಿಕ್ಕಹುಡುಗ ವಾಂಛೇಶ್ವರನಿಗೆ ದೊರೆಯ ಕವಿತೆ ಬಲು ಮೆಚ್ಚಾಗಿ ಕೂಡಲೇ ಈ ಪದ್ಯದಂತೆಯೇ ಪ್ರಾಸ-ಯಮಕ ಕಮನೀಯವಾದ ಮೇಲಿನ ಗೀತಿಯನ್ನು ಆಶುವಾಗಿ ಹೇಳಿದ; "ಈ ಕವಿತೆಯನ್ನುಳಿದು ಇತರ ಶಬ್ದಗಳು ನನ್ನ ಮನಸ್ಸಿಗೆ ಯಥಾವತ್ಪೂರ್ಣವಾಗಿ ಕೂಡಲೇ ಬಂದು ನುಗ್ಗುವುದಿಲ್ಲ. ಭೂಮೀಶ್ವರನಾದ ಶಹಾಜಿ

ಸದೃಶನಾದವನು ಕವಿಲೋಕದಲ್ಲಿ ಮತ್ತೊಬ್ಬನು ಕಾಣುತ್ತಿಲ್ಲ". ಪ್ರೌಢವಾದ ಷಡ್ವಾಲಂಕೃತಿಯ ಪದ್ಯವನ್ನು ಆ ಎಳೆವೆಯಲ್ಲಿಯೇ ಆಶುವಾಗಿ ಹೇಳಿದ್ದ ವಾಂಛೇಶ್ವರನನ್ನು ಶಹಾಜಿ ಬಹುವಾಗಿ ಮೆಚ್ಚಿ "ಕುಟ್ಟಿಕವಿ" ಎಂದು ಮುದ್ದಿನ ಬಿರುದಿತ್ತು ಆದರಿಸಿದ. ಇವನೇ ಮುಂದೆ ಅತ್ಯದ್ಭುತ ವಿಡಂಬನ ಕವಿತೆಯಾದ "ಮಹಿಷಶತಕ"ವನ್ನು ಬರೆದು ಶ್ಲೇಷಕವಿಸಾರ್ವಭೌಮನೆಂಬ ಅಗ್ಗಳಿಕೆಯಿಂದ ಶಾಶ್ವತೀಕೃತಕೀರ್ತಿಯಾದನು.

—೬೩—

ಯಸ್ಯ ಷಷ್ಠೀ ಚತುರ್ಥೀ ಚ ವಿಹಸ್ಯ ಚ ವಿಹಾಯ ಚ ।
ಅಹಂ ಚಾಪಿ ದ್ವಿತೀಯಾ ಸ್ಯಾದ್ದ್ವಿತೀಯಾ ಸ್ಯಾಮಹಂ ಕಥಂ ॥

ಹದಿನೆಂಟನೆಯ ಶತಾಬ್ದದಲ್ಲಿ ಕೇರಳದಲ್ಲಿದ್ದ ಮನೋರಮಾ ತಂಪುರಾಟ್ಟಿಯು ಮಹಾ ವ್ಯಾಕರಣವಿದುಷಿ. ಈಕೆಗೆ 'ಮನೋರಮಾ' ಎಂಬ ಹೆಸರು ಬರಲು ಕಾರಣ ಅವಳಿಗೆ ಭಟ್ಟೋಜಿದೀಕ್ಷಿತರ 'ಪ್ರೌಢಮನೋರಮಾ' ಗ್ರಂಥದ ಮೇಲಿದ್ದ ಪಾಂಡಿತ್ಯವೇ. ಶ್ರೀಹರ್ಷಮಹಾಕವಿಯ ವಿದ್ವದೌಷಧವೆನಿಸಿದ್ದ ನೈಷಧೀಯಚರಿತವನ್ನು 'ಉತ್ತರನೈಷಧಚರಿತ್ರ' ಕಾವ್ಯದಿಂದ ಮುಂದುವರೆಸಿದ ವಿದ್ವತ್ಕವಿ ಮಾಧವನ್‌ಅಟತಿರಿಯು ಈಕೆಯ ಶಿಷ್ಯ. ಇಂಥ ವಿದುಷಿಯ ಮೊದಲನೆಯ ಪತಿಯಾಗಿದ್ದ ರಾಮವರ್ಮನು ತೀರಿಕೊಂಡಬಳಿಕ ಮತ್ತೊಬ್ಬನು ಕೂಡಿಕೆಯ ರೂಪದಿಂದ ಪತಿಸ್ಥಾನಕ್ಕೆ ಬಂದ. ಈ ದ್ವಿತೀಯಪತಿಯೋ ಅದ್ವಿತೀಯಮೂರ್ಖ. ಈತನ ಹೆಸರು ಪಾಕ್ಕಟ್ಟು ಭಟ್ಟತಿರಿ. ಇವನಿಗೆ ಸಂಸ್ಕೃತವ್ಯಾಕರಣದಲ್ಲಿ 'ರಾಮಶಬ್ದ' (ಅಕಾರಾಂತ ಪುಲ್ಲಿಂಗದ ವಿಭಕ್ತಿ ಮತ್ತು ವಚನಗಳ ಪಟ್ಟಿ)ವನ್ನುಳಿದು ಮತ್ತೇನೂ ಬರದು. ಇಂಥ ಹೆಡ್ಡನಿಗೆ ಹೇಗೆ ತಾನೇ ಹೆಂಡತಿಯಾಗಿ ಬಾಳುವುದೆಂದು ಆಕೆಯು ವ್ಯಥೆಪಡುತ್ತಾ ಸ್ವಗತವಾಗಿ ಹೇಳಿಕೊಂಡದ್ದೇ ಮೇಲಣ ಆಶುಕವಿತೆಯೆಂದು ಕೇರಳದ ವಿದ್ವತ್ಪರಂಪರೆ ತಿಳಿಸುತ್ತದೆ.

"ಯಾರಿಗೆ 'ವಿಹಸ್ಯ' ಮತ್ತು 'ವಿಹಾಯ' ಶಬ್ದಗಳು ಷಷ್ಠೀ ಹಾಗೂ ಚತುರ್ಥೀವಿಭಕ್ತಿಗಳೋ(ವಸ್ತುತಃ ವಿಹಸ್ಯ-ವಿಹಾಯಗಳೆರಡೂ ಅವ್ಯಯಗಳು), 'ಅಹಂ' (ನಾನು) ಎಂಬುದೂ ದ್ವಿತೀಯಾವಿಭಕ್ತಿಯೋ ಅಂಥವನಿಗೆ ನಾನು ಹೇಗೆ ದ್ವಿತೀಯ (ಹೆಂಡತಿ)ಯಾಗಲಿ ?"

---

ಟಿಪ್ಪಣಿ :- ಇಲ್ಲಿ ಸ್ವಾರಸ್ಯವಿರುವುದು ರಾಮಶಬ್ದಮಾತ್ರ ಬರುವ ಆ ಶುಂಠನು 'ವಿಹಸ್ಯ' ಎಂಬುದನ್ನು 'ರಾಮಸ್ಯ' ಎಂದೂ, 'ವಿಹಾಯ' ಎಂಬುದನ್ನು 'ರಾಮಾಯ' ಎಂದೂ, 'ಅಹಂ' ಎಂಬುದನ್ನು 'ರಾಮಂ' ಎಂದೂ ವ್ಯಾಕರಣಪ್ರಕ್ರಿಯೆಯಿಲ್ಲದೆ ಅಂತ್ಯವರ್ಣ ಸಾಮ್ಯದಿಂದ ತಪ್ಪಾಗಿ ಹೇಳಿ ನಗೆಗೀಡಾಗಿರುವುದರಲ್ಲಿದೆ.

—೬೪—

ಕಾಧಯಾತಾಹೇ ತರ್ಕೇ ವಾದಯಾತಾಹೇ ಸುಶಬ್ದಗಣೋದರೇ ।
ಮಂದರವೃತ್ತಂ ವರ್ತೇ ಪ್ರತ್ಯುತಸುಧಾಂಬುಧೌ ಮಹಾಗತೇ ॥

ಆಂಧ್ರಪ್ರದೇಶದ ಸುಪ್ರಸಿದ್ಧವೆಂಬ ಸಂಸ್ಥಾನದಲ್ಲಿ ಕಳೆದ ಶತಾಬ್ದದ ಆರಂಭದಲ್ಲಿ ವಿದ್ಯೋಭಿಸಿದ ಪಂಡಿತರಲ್ಲಿ ತಿರುಪತಿ ವೇಂಕಟಾಚಾರ್ಯರು ಅತಿ ಗಣ್ಯರು. ಪ್ರತಿದಿನಪ್ರಬಂಧಪರಮೇಶ್ವರರೂ, ಶ್ಲೇಷ-ಯಮಕ ಚಕ್ರವರ್ತಿಗಳೂ ಆಗಿ ಅನೇಕ ಕಾವ್ಯ-ಶಾಸ್ತ್ರಗ್ರಂಥ ಕರ್ತೃವೆನಿಸಿದ್ದರು. ದ್ವೈತ-ಅದ್ವೈತಗಳನ್ನು ಪಾದುಕೆಗಳಾಗಿ, ವಿಶಿಷ್ಟಾದ್ವೈತವನ್ನು ಕಿರೀಟವಾಗಿ ಧರಿಸಿದವರೆಂಬ ಖ್ಯಾತಿಯಿಂದಲೇ ಕಿರೀಟಪತಿ ಎಂಬ ಬಿರುದು ಬಂದಿತ್ತು! ಇವರು ತಮ್ಮ ಪಾದುಕೆಗಳಿಗೆ ಪರಮತಖಂಡನ, ಸ್ವಮತಸಾಧನ ಎಂಬ ಹೆಸರನ್ನೂ; ಕೈಗೋಲಿಗೂ, ಛತ್ರಕ್ಕೂ ತ್ರಿಭಾಷ್ಯ, ಯತಿರಾಜ ಎಂದೂ ಹೆಸರುಗಳನ್ನು ಇಟ್ಟಿದ್ದರಂತೆ!!

ಕೇವಲ ಮೂವತ್ತೆರಡು ವರ್ಷಗಳ ಕಾಲ ಜೀವಿಸಿದ್ದ ಈ ಮಹಾಪಂಡಿತ ಕವಿ ತಮ್ಮ ಜೀವಿತಾವಧಿಯಲ್ಲಿಯೇ ದಂತಕಥೆಯಾದರು.

ಒಮ್ಮೆ ತಮ್ಮ ಎಲ್ಲ ಬಿರುದು ಬಾವಲಿಗಳೊಡನೆ ಶಿಷ್ಯವೃಂದದ ಜೊತೆಗೆ ಆಡಂಬರದಿಂದ ಪುಣೆಯಲ್ಲಿದ್ದ ಪೇಷ್ವೆ ಮಾಧವರಾಯರನ್ನು ಕಾಣಲು ಇವರು ಹೋದರಂತೆ. ಆಗ ಪೇಷ್ವೆ ತಮ್ಮ ಬಳಿಯಿದ್ದವರನ್ನು ಮರಾಠಿಯಲ್ಲಿ 'ಈ ಆಡಂಬರದ ವ್ಯಕ್ತಿ ಯಾರು ?' ಎಂದು ಕೇಳುತ್ತಿರಲು ವೇಂಕಟಾಚಾರ್ಯರು ಆತನ ಇಂಗಿತವನ್ನು ಗ್ರಹಿಸಿ ಕೂಡಲೇ ಮರಾಠಿಭಾಷೆಯ ಛಾಯೆ ಬರುವಂತೆ, ಆದರೆ ಶುದ್ಧಸಂಸ್ಕೃತದ್ದೇ ಆದ ಮೇಲಿನ ಗೀತಿಯನ್ನು ಆಶುವಾಗಿ ಹೇಳಿದರಂತೆ.

"ತರ್ಕದಲ್ಲಿ ನಾನು ಕಣಾದನಿಗೆ ಹೆದರಿಕೆ ತರಿಸುವವನು, ಸಾಧ್ವಸಾಧುಶಬ್ದ ನಿರ್ಣಯದ ವ್ಯಾಕರಣದಲ್ಲಿ ಪತಂಜಲಿಗೆ ಹೆದರಿಕೆ ತರಿಸುವವನು. ವೇದಾಂತ ಸುಧಾಸಮುದ್ರದ ಆಳಗಳಲ್ಲಿ ಮಂದರಪರ್ವತದ ಕೆಲಸವನ್ನು (ಮಥನವನ್ನು) ಕೈಗೊಂಡವನು" ಎಂದು.

ಬಳಿಕ ಪೇಷ್ವೆಯು ಇವರ ಪಾಂಡಿತ್ಯ-ಸಮಯಸ್ಫೂರ್ತಿಗಳಿಗೆ ಬೆರಗಾಗಿ ವಾದಸಭೆ ಮಾಡಿಸಿ ಉದ್ದಂಡಪಂಡಿತರನ್ನೂ ಲೀಲೆಯಿಂದ ಜಯಿಸಿದ ಆಚಾರ್ಯರಿಗೆ ಅಮೋಘಸಂಮಾನಗಳನ್ನು ಮಾಡಿದನೆಂದು ತಿಳಿಯುತ್ತದೆ.

—೭೫—

ನಿಷ್ಪಿಷ್ಟಾಪಿ ಪರಂ ಪದಾಹತಿಶತೈಃ ಶಶ್ವದ್ಘನುಷ್ಯಾಣನಾಂ
ಸಂತಪ್ತಾಪಿ ಕರೈಃ ಸಹಸ್ರಕಿರಣೇನಾಗ್ನಿಸ್ಫುಲಿಂಗೋಪಮೈಃ।
ಛಾಗಾದ್ಯೈಶ್ಚ ವಿಚರ್ವಿತಾಪಿ ಸತತಂ ವೃಷ್ಟಾಪಿ ಕುದ್ದಾಲಕೈಃ।
ದೂರ್ವಾ ನ ಮ್ರಿಯತೇ ತಥಾಪಿ ನಿತರಾಂ ಧಾತುರ್ದಯಾ ದುರ್ಬಲೇ ॥

ಸ್ವಾತಂತ್ರ್ಯಕ್ಕೆ ಶತಮಾನದ ಹಿಂದೆ ಕಲ್ಕತ್ತೆಯಲ್ಲಿದ್ದ ಗೋಂಕ್ರೀ ಸಂಸ್ಕೃತಪಾಠಶಾಲೆಯನ್ನು ವಿಲಿಯಂಬೆಂಟಿಂಕ್ ಧಾರ್ಷ್ಟ್ಯದಿಂದ ಮುಚ್ಚಿಸಿದ.

ವಿಲಿಯಂಜೋನ್ಸ್, ವಿಲ್ಸನ್ ಮೊದಲಾದವರಿಂದ ಆದರಣೆ ಪಡೆದಿದ್ದ ಆ ಶಿಕ್ಷಣಸಂಸ್ಥೆಯೊಂದಿಗೆ ಅನೇಕ ಸಂಸ್ಕೃತಾಧ್ಯಯನ ಕೇಂದ್ರಗಳು ಬ್ರಿಟಿಷರ ಕೂಟನೀತಿ, ಹಿಂದೂದ್ವೇಷ, ಭಾರತೀಯ ಸ್ವೋಪಜ್ಞತಾ ದಮನತಂತ್ರಗಳಿಂದಾಗಿ ನಶಿಸಿ ವಿದ್ಯೆಯೂ, ವಿದ್ವಾಂಸರೂ ಮೃತಪ್ರಾಯರಾದರು. ಆಗ ಗೌಡಶ್ರೀ ಪಾಠಶಾಲೆಯ ಕುಲಪತಿ ಪ್ರೇಮಚಂದ್ರವಾಗೀಶನು ಇಂಗ್ಲೆಂಡಿನಲ್ಲಿದ್ದ ಸಂಸ್ಕೃತಜ್ಞ ಹೆಚ್. ಹೆಚ್. ವಿಲ್ಸನ್‌ಗೆ ಪತ್ರ ಬರೆದನು. ಆ ಪತ್ರವು ಕವಿತಾಮಯವಾಗಿ ಸಂಸ್ಕೃತದ ದುಃಸ್ಥಿತಿಯನ್ನೂ, ಪಾಠಶಾಲೆಯ ಪಿಧಾನವನ್ನೂ ವರ್ಣಿಸಿತ್ತು. ಇದಕ್ಕೆ ನಾಲ್ಕು ಸುಂದರ ಶ್ಲೋಕಗಳಲ್ಲಿ ವಿಲ್ಸನ್ನನ ಪ್ರತಿಕ್ರಿಯೆ ಬಂದಿತು. ಪುನಃ ದೀನತಾದ್ಯೋತಕ ಪತ್ರವೊಂದನ್ನು ಪ್ರೇಮಚಂದ್ರವಾಗೀಶನು ಬರೆಯಲು ವಿಲ್ಸನ್ ಮೇಲಿನ ಮನೋಜ್ಞ ಸಂಸ್ಕೃತಪದ್ಯವನ್ನು ಶಾರ್ದೂಲವಿಕ್ರೀಡಿತವೃತ್ತದಲ್ಲಿ ಅನ್ಯಾಪದೇಶವಾಗಿ ಬರೆದು ಕಳುಹಿದನು.

"ನೂರಾರು ಜೀವಿಗಳ ನಿರಂತರ ತುಳಿತದಿಂದಾಗಿ ಮರ್ದಿಸಲ್ಪಟ್ಟರೂ, ಬೆಂಕಿಯ ಕಿಡಿಗಳಂಥ ಸೂರ್ಯನ ಕಿರಣಗಳಿಂದ ಸುಟ್ಟು ಹೋದರೂ, ಮೇಕೆ-ಕುರಿ-ದನಗಳಿಂದ ತಿನ್ನಲ್ಪಟ್ಟರೂ, ಗುದ್ದಲಿಗಳಿಂದ ಅಗೆಯಲ್ಪಟ್ಟರೂ ಹುಲ್ಲು ಸಾಯುವುದಿಲ್ಲ ; ದೇವರಿಗೆ ದುರ್ಬಲರಲ್ಲಿ ಅಪಾರ ದಯೆ."

ಇಂದೂ ಸಂಸ್ಕೃತವನ್ನು ದುರ್ಮದಾಂಧರಾಗಿ ಕುತ್ಸಿತಮತಿಯಿಂದ ದ್ವೇಷಿಸುವ ಗಾವಿಲರು ವಿಲ್ಸನ್ನನ ಸಂಸ್ಕೃತಪ್ರೇಮವನ್ನು ಗಮನಿಸಬೇಕು ; ಅಂತೆಯೇ ಬ್ರಿಟಿಷ್‌ಸರ್ಕಾರದ ಪ್ರಧಾನಧೋರಣೆಯಾಗಿದ್ದ ಭಾರತೀಯ ಸ್ವಾಯತ್ತ್ಯನಾಶನವು ಹೇಗೆ ಸಂಸ್ಕೃತದ ನಾಶದಿಂದ ಸಫಲವಾಯ್ತೆಂಬುದನ್ನೂ ಪರಿಶೀಲಿಸಬೇಕು. ಇಂದಾದರೂ, ಮುಂದಾದರೂ, ಎಂದಾದರೂ ಸಂಸ್ಕೃತವೇ ನಮ್ಮ ಸ್ವಂತಿಕೆಯ ಉನ್ನತಿಕೆಯ ಏಕೈಕಾಲಂಬನವೆಂಬುದನ್ನು ಎಲ್ಲರೂ ಮನಗಾಣಬೇಕು.

—೬೬—

ವಿದ್ಯಾಧರೋಽಪ್ಸರೋಯಕ್ಷರಕ್ಷೋಗಂಧರ್ವಕಿಂನರಾಃ ।
ಕೃಷ್ಣರಾಜ ಮಹಾರಾಜ ಗಾಯಂತಿ ತವ ವೈಭವಂ ॥

ಮುಮ್ಮಡಿ ಶ್ರೀಕೃಷ್ಣರಾಜಒಡೆಯರು ಸ್ವಯಂ ವಿದ್ವಾಂಸರಾಗಿ, ವಿದ್ವತ್ಪೋಷಕರಾಗಿ ಸುಪ್ರಸಿದ್ಧರು. ಇವರ ಕಾಲದಲ್ಲಿ ಕನ್ನಡಭಾಷೆಯು ಸಮಗ್ರ ರಾಮಾಯಣ ಮಹಾಭಾರತಾದಿ ಗ್ರಂಥಗಳ ಗದ್ಯರೂಪವನ್ನು ಕಂಡಿತು. ಘನಗಲ್ ರಾಮಶಾಸ್ತ್ರಿ, ಸೋಸಲೆ ಗರಳಪುರಿಶಾಸ್ತ್ರಿ, ಕಾಶೀಶೇಷಶಾಸ್ತ್ರಿ, ಕಿರೂರು ಶ್ರೀನಿವಾಸಾಚಾರ್ಯ, ಗೂಳಿ ಬಾಳಾಚಾರ್ಯ ಮೊದಲಾದ ಮಹಾ ಪಂಡಿತರು ವಿಜೃಂಭಿಸಿದುದೂ ಒಡೆಯರ ಆಶ್ರಯದಲ್ಲಿಯೇ.

ಸ್ವಯಂ ವಿದ್ವದ್ರಸಿಕರಾದ ಪ್ರಭುಗಳೊಮ್ಮೆ ವ್ಯಾಕರಣಾದಿ ಬಹುಶಾಸ್ತ್ರ ಪಂಡಿತರೂ ತಮಗೆ ತುಂಬ ಸಲುಗೆಯಿರುವವರೂ ಆದ ಕಾಶೀಶೇಷಶಾಸ್ತ್ರಿ ಗಳೊಡನೆ ಮಾತನಾಡುತ್ತಾ ತುಂಬ ಶಾಸ್ತ್ರಾಭ್ಯಾಸವನ್ನೇ ಮಾಡಿದವರಿಗೆ ಸರಸ ಕವಿತೆ ಅಳವಡುವುದಿಲ್ಲವೆಂದು ಹೇಳಿದರಂತೆ. ಪ್ರಭುಗಳೇ 'ಬೇಕಿಚೂರು' ಎಂದು ಪ್ರೀತಿಯ ಮೆಚ್ಚುಗೆಯಿಂದ ಗುರುತಿಸಲ್ಪಡುತ್ತಿದ್ದ ಶಾಸ್ತ್ರಿಗಳು ಕೂಡಲೇ ಕಿರಿಳ ಅದು ಅಜ್ಞರ ಅಭಿಪ್ರಾಯವೆಂದು ಅಬ್ಬರಿಸಿದರು. ಆಗ ಒಡೆಯರು ಶಾಸ್ತ್ರಿಗಳಿಗೆ "ವಿದ್ಯಾಧರೋಽಪ್ಸರೋಯಕ್ಷರಕ್ಷೋಗಂಧರ್ವಕಿಂನರಾಃ" ಎಂಬ ಅಮರಕೋಶದ ಪ್ರಥಮಕಾಂಡದ ಸ್ವರ್ಗವರ್ಗದ ಸಾಲೊಂದನ್ನು ಹೇಳಿ ಆ ಕೂಡಲೇ ಪರಿಹಾರರೂಪದಿಂದ ಸಮಸ್ಯಾಪೂರಣ ಮಾಡಲು ಕೇಳಿದರು. ಮರು ಕ್ಷಣದಲ್ಲಿಯೇ ಶಾಸ್ತ್ರಿಗಳು "ಕೃಷ್ಣರಾಜ! ಮಹಾರಾಜ! ಗಾಯಂತಿ ತವ ವೈಭವಂ" ಎಂದು ಪೂರೈಸಿ ಅಪಾರ ಅಭಿನಂದನೆಗಳನ್ನು ಪಡೆದರು.

ಈ ಶ್ಲೋಕದಲ್ಲಿ ವಿದ್ಯಾಧರರು, ಅಪ್ಸರೆಯರು, ಯಕ್ಷರು, ರಾಕ್ಷಸರು, ಗಂಧರ್ವರು ಮತ್ತು ಕಿಂನರರು ಒಡೆಯರ ಕೀರ್ತಿಯನ್ನೂ, ಮಹಿಮೆಯನ್ನೂ ಹಾಡುತ್ತಿರುವರೆಂಬ ಹೃದ್ಯಕಲ್ಪನೆ ಉಂಟು.

—೬೭—

ನೀವಾರಶೂಕವತ್ತನ್ವೀ ವಿದ್ಯುಲ್ಲೇಖೇವ ಭಾಸ್ವರಾ ।
ರಮಣೀ ರಮಣೀಯೇಯಂ ಸ್ಮರಣೀಯಾ ಸ್ಮರಾರಣೀ ॥

ಮುಮ್ಮಡಿ ಶ್ರೀಕೃಷ್ಣರಾಜ ಒಡೆಯರ ವಿದ್ವತ್ಪ್ರಾಶಸ್ತ್ಯ ಸುಪ್ರಸಿದ್ಧವಷ್ಟೆ ! ಇವರ ಅರಮನೆಯ ಪೂಜಾಗೃಹದಲ್ಲೊಮ್ಮೆ ದೇವತಾರಾಧನೆ ನಡೆಯುತ್ತಿದ್ದಾಗ ವಾಡಿಕೆಯಂತೆ ಅಲ್ಲಿಗೆ ಬಂದಿದ್ದ ಹಲವರು ವಿದ್ವಾಂಸರಲ್ಲಿ ಸಂಭಾಷಿಸುತ್ತಾ ಪ್ರಭುಗಳು ಅದು ಹೇಗೋ ಆಶುಕವಿತೆಯತ್ತ ಹೊರಳಿದರು. ಅಲ್ಲಿದ್ದ ಪಂಡಿತರನ್ನು ಆ ಕೂಡಲೇ ಉದ್ದೇಶಿಸಿ ಆಗತಾನೇ ದೇವರಿಗೆ ಅರ್ಪಿತವಾಗುತ್ತಿದ್ದ ಋಗ್ವೇದಮಂತ್ರಪುಷ್ಪದ ಸಾಲನ್ನು—'ನೀವಾರಶೂಕವತ್ತನ್ವೀ ವಿದ್ಯುಲ್ಲೇಖೇವ ಭಾಸ್ವರಾ' ಕೊಟ್ಟು ಸಮಸ್ಯಾಪೂರಣವನ್ನು ದೇವರಿಗೆ ನೀರಾಜನವನ್ನು ಮಾಡುವುದರೊಳಗಾಗಿ ಸಾಧಿಸಬೇಕೆಂದು ಕೋರಿದರು. ಅಷ್ಟು ಹೊತ್ತಿಗೆ ಉತ್ತರನೀರಾಜನಕ್ಕಾಗಿ ಎಲ್ಲ ಸಿದ್ಧವಾಗಿ ಕರ್ಪೂರಖಂಡವಿದ್ದ ಆರಾತ್ರಿಕವು ಪುರೋಹಿತರ ಕೈಯಲ್ಲಿದ್ದಿತು. ಆ ಕೂಡಲೇ ವಿಶಸಂಧಿಗ್ರಾಹಿಗಳೂ, ಅದ್ಭುತವಿದ್ವಾಂಸರೂ ಆದ ಕಾಶೀಶೇಷಶಾಸ್ತ್ರಿಗಳು ರಮಣೀ ರಮಣೀಯೇಯಂ...ಎಂಬ ಉತ್ತರಾರ್ಧವನ್ನು ನೀರಾಜನದರ್ಶನದ ಒಂದು ಸುತ್ತು ಮುಗಿಯುವುದರೊಳಗೇ ಹೇಳಿಬಿಟ್ಟು ದೊರೆಗಳ ಮೆಚ್ಚುಗೆ ಪಡೆದರು.

ಗಂಭೀರವಾದ, ಹೃದಯೋದ್ದಿಪ್ತವೂ, ನಾರಾಯಣಾತ್ಮಕವೂ ಆದ ವೇದವಾಕ್ಯಾರ್ಥವು ಶಾಸ್ತ್ರಿಗಳ ಲಲಿತಶಬ್ದಾಲಂಕಾರಸಂಸ್ಕೃತ ಲೌಕಿಕ ವಾಕ್ಯಾರ್ಥದಿಂದ ಸೇರಿ ಸುಂದರವಾದ ಸುಂದರೀವರ್ಣನೆಯಾಗಿದೆ.

"ಕಾಡುಬತ್ತದ ತುದಿಯಷ್ಟು ತೆಳ್ಳಗಿರುವ, ಮಿಂಚಿನ ಬಳ್ಳಿಯಂತೆ ಬೆಳಗುವ ರಮಣೀಯಳಾದ ಈ ರಮಣಿಯು ಸ್ಮರಣೀಯಳಾಗಿ ಮನ್ಮಥಾಗ್ನಿಗೆ (ಮೂಲ ಹೇತುವಾದ) *ಅರಣಿಯಾಗಿದ್ದಾಳೆ !"

---

* ಅರಣಿ = ಅಗ್ನಿಮಥನ ವೈದಿಕಕಾರ್ಯಕ್ಕಾಗಿ ಉಪಯೋಗಿಸಲು ಬಳಸುವ ಕ ಗೋಲು—ಎರಡುಗಳ ಅಶ್ವತ್ಥ ಮರದ ತುಂಡುಗಳು.

—೬೮—

ಅನಾಘ್ರಾತವ್ಯಂಗ್ಯೈರಪರಿಚಿತಶಬ್ದಾರ್ಥರಚನೈ-
ರಬುದ್ಧಾಲಂಕಾರೈರನವಗತಭಾವೋಜ್ಜ್ವಲರಸೈಃ ।
ಯಶೋಮಾತ್ರಾಂ ಕೂಜನ್ನವನವದುರಾಶೈಃ ಕುಕವಿಭಿ-
ರ್ದುರಧ್ವೇ ವ್ಯಾಕೃಷ್ಟಾ ಭಗವತಿ ವಿಪನ್ನಾಸಿ ಕವಿತೇ ॥

ಸೋಸಲೆ ಗರಳಪುರಿ ಶಾಸ್ತ್ರಿಗಳು ಮುಮ್ಮಡಿ ಶ್ರೀಕೃಷ್ಣರಾಜ ಒಡೆಯರ ಆಸ್ಥಾನವಿದ್ವಾಂಸರು, ವಿದ್ವತ್ಕವಿ. ಅಭಿನವ ಕಾಳಿದಾಸ ಬಸವಪ್ಪಶಾಸ್ತ್ರಿಗಳ ವಿದ್ಯಾಗುರುಗಳು. ಆಶುಕವಿತೆ, ಚಮತ್ಕಾರಪದ್ಯರಚನೆಗಳಲ್ಲಿ ಗಟ್ಟಿಗರು. ಇವರು ಮೈಸೂರಿಗೆ ಬರುವ ಮುನ್ನ ಸೋಸಲೆಯೆಂಬ ಗ್ರಾಮದಲ್ಲಿದ್ದರು. ಅಲ್ಲಿರುವ ಸುಪ್ರಸಿದ್ಧ ವ್ಯಾಸರಾಯರ ಮಠಕ್ಕೆ ಬಂದ ಒಬ್ಬರು ಪಂಡಿತರು ತಮ್ಮ ಸಾಮಾನ್ಯದರ್ಜೆಯ ಕವಿತ್ವವನ್ನು ಸ್ವಾಮಿಗಳಿಗೂ, ಇತರ ಪಂಡಿತರಿಗೂ ಶ್ರುತಪಡಿಸಿದರು. ದಾಕ್ಷಿಣ್ಯದಿಂದ ಯಾರೂ ಆಕ್ಷೇಪಿಸದಿರಲು ಸ್ವಾಮಿಗಳು ಶಿಷ್ಟಾಚಾರದಿಂದ ಸಂಮಾನಿಸಿ ಅವರನ್ನು ಕಳುಹಿಸಿಕೊಟ್ಟರು. ಇದನ್ನು ಕಂಡ ತರುಣ ಗರಳಪುರಿಶಾಸ್ತ್ರಿಗಳಿಗೆ ಬೇಸರವಾಗಿ ಮೇಲಿನ ಶಿಖರಿಣೀಪದ್ಯವನ್ನು ಸ್ವಾಮಿಗಳು ನಿತ್ಯವೂ ಸ್ನಾನಕ್ಕೆ ಹೋಗುವ ಮಾರ್ಗದಲ್ಲಿದ್ದ ಮಂಟಪದ ಗೋಡೆಯಮೇಲೆ ಬರೆದರು.

"ಧ್ವನಿಯ ವಾಸನೆಯೂ ಇಲ್ಲದ, ಶಬ್ದಾರ್ಥಗಳ ಹೊಂದಿಕೆಯೂ ಇರದ, ಅಲಂಕಾರದ ಪ್ರಜ್ಞೆ ಇಲ್ಲದ, ಭಾವ-ರಸಗಳ ಸೆಳೆತರದ ಕೇವಲ ಹಣ-ಹೆಸರುಗಳ ಆಸೆಯಿಂದ ಕೂಗಾಡುವ ಕುಕವಿಗಳಿಂದ ಕೆಟ್ಟದಾರಿಗೆ ಸೆಳೆಯಲ್ಪಟ್ಟು ಕಷ್ಟಪಡುತ್ತಿರುವೆಯಲ್ಲಾ ! ತಾಯೀ ! ಕವಿತೆ !" ಎಂಬ ತಾತ್ಪರ್ಯವನ್ನು ಮರುದಿನ ಬೆಳಗ್ಗೆ ಸ್ನಾನಕ್ಕೆ ಹೋಗುವಾಗ ಯತಿಗಳು ಆ ಪದ್ಯಪಂಕ್ತಿಯಿಂದ ತಿಳಿದು ಇದು ಯಾರದೆಂದು ವಿಚಾರಿಸಿದಾಗ ಪ್ರೌಢವಿದ್ಯಾರ್ಥಿ ಗರಳಪುರಿ

ಶಾಸ್ತ್ರಿಗಳದ್ದೆಂದು ಗೊತ್ತುಮಾಡಿಕೊಂಡರು. ಪ್ರಾಚೀನಕವಿವರರ ಪದ್ಯಶಿಲ್ಪದಂತೆಯೇ ಅನವದ್ಯವೂ, ಸೂಕ್ಷ್ಮಾರ್ಥಗರ್ಭಿತವೂ ಆದ ಈ ಕವನ ಚಾತುರ್ಯಕ್ಕೆ ಮೆಚ್ಚಿ ಯತಿವರರು ಹರಸಿದರು.

— ೬೯ —

ನೃಸಿಂಹಾಖ್ಯೇ ಗಂಡಶೈಲೇ ವರದಾಖ್ಯೋ ಮಹಾಮಣಿಃ ।
ನಿಪತ್ಯ ಖಲು ತತ್ರೈವ ವ್ಯಶೀರ್ಯತ ಸಹಸ್ರಧಾ ॥

ಮುಮ್ಮಡಿ ಶ್ರೀಕೃಷ್ಣರಾಜ ಒಡೆಯರ ಆಸ್ಥಾನದಲ್ಲಿ ಒಮ್ಮೆ ವ್ಯಾಕರಣದ ನರಸಿಂಹಶಾಸ್ತ್ರಿಗಳೆಂಬ ಪಂಡಿತರು ಪ್ರಭುಗಳ ಸ್ತೋತ್ರರೂಪದ ಪದ್ಯವೊಂದನ್ನು ಬರೆದು ತಂದು ನಿವೇದಿಸಿದರು. ಆ ಸ್ತುತಿಯು ಸಾಮಾನ್ಯವಾಗಿ ಬಳಕೆಯಲ್ಲಿಲ್ಲದ ಯಾವುದೋ ಅಜ್ಞಾತ ವರ್ಣಸಮವೃತ್ತ (ಛಂದಸ್ಸು)ದಲ್ಲಿ ಇದ್ದಿತು. ಇದನ್ನು ಸಭಾಮುಖದಲ್ಲಿ ಕೇಳಿದ ಕೂಡಲೇ ಕವಿವರದಾಚಾರ್ಯರೆಂಬ ಮತ್ತೊಬ್ಬ ವಿದ್ವಾಂಸರು ಈ ಪದ್ಯವು ಅಪ್ರಚುರ ವೃತ್ತನಿಬದ್ಧವಾದ ಕಾರಣ ದೋಷದುಷ್ಟವಾಗಿದೆಯೆಂದು ಆಕ್ಷೇಪಿಸಿದರು. ಆಗ ಸೋಸಲೆ ಗರಳಪುರಿಶಾಸ್ತ್ರಿಗಳು ಷಟ್ಪ್ರತ್ಯಯಗಳ ಮೂಲಕ ಪ್ರಸ್ತಾರಹಾಕಿ ಆ ಪದ್ಯದ ಛಂದಸ್ಸಿನ ಸಂಖ್ಯೆ, ವರ್ಗ, ನಾಮ, ಯತಿಸ್ಥಾನಾದಿಗಳನ್ನು ಗ್ರಂಥಾಂತರಗಳಿಂದಲೂ ಸಾಧಿಸಿ ತೋರಿಸಿದಾಗ ವರದಾಚಾರ್ಯರು ತಮ್ಮ ಆಕ್ಷೇಪವನ್ನು ಹಿಂದೆಗೆದುಕೊಂಡರು. ಆಗ ಹರ್ಷದಿಂದ ನರಸಿಂಹಶಾಸ್ತ್ರಿಗಳು ಮೇಲಿನ ಶ್ಲೋಕವನ್ನು ಹೇಳಿದರು.

"ನೃಸಿಂಹನೆಂಬ ಬಂಡೆಯ ಮೇಲೆ ಬಿದ್ದ ವರದನೆಂಬ ಮಣಿ ಅಲ್ಲಿಯೇ ಪುಡಿ ಪುಡಿಯಾಯಿತು" ಎಂಬ ತಾತ್ಪರ್ಯದ ಈ ಆಶುವನ್ನು ಕೇಳಿ ಒಡೆಯರು ಅಪ್ರಚುರವೃತ್ತವೆಂಬ ಆಚಾರ್ಯರ ಆಕ್ಷೇಪವೂ ಸಾಧು, ಇದಕ್ಕೆ ಪ್ರತಿಯಾ

ಕೋಪಲೆಯವರ ಉತ್ತರವೂ ಸಾಧು, ಈ ಜಿಜ್ಞಾಸೆಗೆ ಕಾರಕವಾದ ಶಾಸ್ತ್ರಿಗಳ ಪದ್ಯವೂ ಸಾಧುವೆಂದು ಸಮಬುದ್ಧಿಯಿಂದ ವಿವಾದ-ಮನಸ್ತಾಪಗಳನ್ನು ತಪ್ಪಿಸಿ ಮೂವರಿಗೂ ಶಾಲುಜೋಡಿಗಳ ಸಂಮಾನ ಮಾಡಿದರು.

—೭೦—

ತ್ವಮಸಿ ರಸಿಕಮಧ್ಯೇ ಮಂಗಲಸ್ಥಾನರಮ್ಯಃ
ಸಮರಮ್ಯದಿತಶತ್ರುಃ ಕಿಂ ಚ ರಂಭಾರತೀಚ್ಛುಃ ।
ದರಧರಹೃದಯೋಽಹಂ ನೇಶ್ವರಶ್ರೀರ್ಜಿತೋಽನ್ಯೈಃ
ಮಮ ಏತರ ಸಮೃದ್ಧ್ಯೈ ಮಂದಿರೇ ಕಾ ಕ್ಷತಿಸ್ತೇ ॥

ಗರಳಪುರಿಶಾಸ್ತ್ರಿಗಳ ಕವಿತಾಚಾತುರ್ಯ ಅದೆಷ್ಟು ಅದ್ಭುತವೋ, ಅವರ ದಾಕ್ಷಿಣ್ಯ-ಸಂಕೋಚಪ್ರವೃತ್ತಿಯೂ ಅಷ್ಟು ದೊಡ್ಡದು. ಮೈಸೂರಿನಲ್ಲಿ ನೆಲಸಿ ಆಳಿಯ ಲಿಂಗರಾಜೇಅರಸಿನವರ ಆಶ್ರಯದಲ್ಲಿ ನಿಂತು ಅರಸಿನವರ ಕಾವ್ಯ ಪರಿಷ್ಕಾರಾದಿಗಳನ್ನು ಮಾಡುತ್ತಿದ್ದರು. ಆಗ ಸಂಸಾರ ಬೆಳೆದು, ಆಶ್ರಿತರು ಹೆಚ್ಚಾಗಿ ದೊಡ್ಡಮನೆಯೊಂದರ ಅವಶ್ಯಕತೆ ಉಂಟಾಯಿತು. ಹಣವಿಲ್ಲದ ಶಾಸ್ತ್ರಿಗಳು ಯಾಚನೆಗೆ ತುಂಬ ಹಿಂದೆಗೆಯುವವರು ಕೂಡ ! ಅದು ಹೇಗೋ ಕಡೆಗೆ ಮೇಲಣ ಮಾಲಿನೀವೃತ್ತದ ಪದ್ಯವನ್ನು ರಚಿಸಿ ಅರಸಿನವರಿಗೆ ನಿವೇದಿಸಿದರು. ಸ್ವಯಂ ಕವಿಯಾದ ಲಿಂಗರಾಜೇಅರಸುಗಳು ಈ ಪದ್ಯದ ಚಮತ್ಕಾರವನ್ನು ಗ್ರಹಿಸಿ 'ಶಾಸ್ತ್ರಿಗಳೇ ! ಇಂಥ ಪದ್ಯಕ್ಕೆ ಬರಿಯ ಮನೆ ಸಾಕೇ? ಒಂದು ರಾಜ್ಯವನ್ನೇ ಬಹುಮಾನವಾಗಿ ಕೊಡಬಹುದು' ಎಂದು ತಕ್ಕ ಸಹಾಯ ಮಾಡಿದರು.

ಅಂಥ ಚಮತ್ಕಾರ ಇಲ್ಲಿದ್ದುದಾದರೂ ಏನು ? ಎಂಬ ಪ್ರಶ್ನೆ ಉಂಟಾಗಬಹುದು ; ಆ ವಿವರಗಳನ್ನಿಲ್ಲಿ ಗಮನಿಸಬಹುದು.

"ನೀನು ರಟಿರ ನಡುವೆ ಮಂಗಳಕರಧ್ವನಿಯುಳ್ಳವನು, ಶತ್ರುಗಳನ್ನು ಯುದ್ಧದಲ್ಲಿ ಮರ್ದಿಸಿದನು, ಅಲ್ಲದೆ ರಂಭಾಭೋಗಾಸಕ್ತನೂ ಹೌದು. ನಾನಾದರೋ ಅರೆನಡುಗುವ ಎದೆಯ, ಆಶ್ರಯದಾತರಿಲ್ಲದ, ಇತರರಿಂದ ಸೋಲಿಸಲ್ಪಟ್ಟ ದೀನ. ನನಗೆ ಒಳಿತಾಗಲೆಂದು ನೀನು ಮನೆಯನ್ನು (ಮಂದಿರ) ಕೊಟ್ಟರೆ ನಿನಗೇನೂ ನಷ್ಟವಿಲ್ಲ" ಎಂಬ ಸಾಮಾನ್ಯಾರ್ಥವಲ್ಲದೆ ಈ ಪದ್ಯದ ಪೂರ್ವಾರ್ಧದಿಂದ ಕ್ರಮವಾಗಿ ಮಂ, ದಿ, ರಂ ಎಂಬ ಅಕ್ಷರಗಳನ್ನು ತೆಗೆದು ಉತ್ತರಾರ್ಧದಲ್ಲಿ ಮಂ-ದರ, ದಿ-ನೇಶ್ವರ, ರಂಜಿತೋ ಎಂಬಲ್ಲಿಗೆ ಹೊಂದಿಸಿದರೆ ಪೂರ್ವಾರ್ಧದಲ್ಲಿ ಅಪಾರ್ಥವೇನೂ ಬಾರದು ; ಉತ್ತರಾರ್ಧದಲ್ಲಿ ಅತಿಶಯಾರ್ಥವು ಒಂದು ಕವಿಯ ದೈನ್ಯ ಕಳೆಯುತ್ತದೆ. ಅದು ಹೀಗೆ : "ನೀನು ರಟಿರ ನಡುವೆ ಒಳ್ಳೆಯ ಕಂಠವುಳ್ಳಾತ, ರಣದಲ್ಲಿ ನಿನ್ನ ಶತ್ರುಗಳು ಸಾಯುತ್ತಾರೆ, ಅಲ್ಲದೆ ನೀನು ಸರಸ್ವತ್ಯಾರಾಧನೆಯಲ್ಲಿ ಬಯಕೆ ಉಳ್ಳವನು. ನಾನು ಮಂದರಧಾರಿ ಹರಿಯನ್ನು ಹೃದಯದಲ್ಲಿ ಹೊಂದಿ, ದಿನಪ(ರವಿ)ನಂತೆ ಬೆಳಗಿ, ಇತರರಿಂದ ರಂಜಿತನಾಗುತ್ತೇನೆ. ನನಗೆ ಮಂದಿರವನ್ನು ಕೊಟ್ಟರೆ ನಿನಗೆ ಹಾನಿ ಇಲ್ಲ !" ಈ ರೀತಿ 'ಮಂದಿರ'ದ ವಿನಿಯೋಗವಾಯಿತು !!

—೭೧—

ಯೋಗಕ್ರಿಯಾರ್ಥಂ ಖಲು ವೃಕ್ಷರಾಜೋ
ವರ್ಣಕ್ರಿಯಾರ್ಥಂ ಖಲು ಭೃಂಗರಾಜಃ ।
ತಾರಾಕ್ರಿಯಾರ್ಥಂ ಖಲು ಪಿಟ್ರರಾಜೋ*
ನ ಕಿಂಚಿದರ್ಥಂ ಭುವಿ ಸರ್ಪರಾಜಃ ॥

ಕ್ರಿ.ಶ. ಹತ್ತೊಂಬತ್ತನೆಯ ಶತಮಾನದಲ್ಲಿ ಆಂಧ್ರದ ವಿಶಾಖಪಟ್ಟಣ:

* ಪಿಟ್ + ತರಾಜ. 'ಪಿಟ್' ಎಂದರೆ ಪತ್ರ ಎಂದರ್ಥ. 'ತರಾಜ' ಎಂಬುದು [illegible] 'ತರಾಜೂ' ಎಂಬ [illegible] [illegible].

ಜಿಲ್ಲೆಯ ಪಾರ್ವತೀಪುರ ತಾಲ್ಲೂಕಿನ ನಾಗೂರು ಎಂಬ ಅಗ್ರಹಾರದಲ್ಲಿ ನಡಿಮಿಂಟಿ ಮಂಗಳೇಶ್ವರಶಾಸ್ತ್ರಿಯೆಂಬ ಉದ್ದಂಡಕವಿ-ಪಂಡಿತರು ಜನಿಸಿದರು. ಇವರು ವ್ಯಾಕರಣದಲ್ಲಿ ಅಗ್ರೇಸರರು. ವಿಕಟಕವಿತೆಯಲ್ಲಿ ತೆನಾಲಿರಾಮಕೃಷ್ಣನಿಗೆ ಸರಿಸಾಟಿ.

ಯಾವ ಪದ್ಯಕ್ಕೆ ಬೇಕಾದರೂ, ಎಂಥ ಅರ್ಥವನ್ನಾದರೂ ತಮ್ಮ ಅಶೇಷ ವ್ಯಾಕರಣಪ್ರಜ್ಞೆಯಿಂದ ಹೊಂದಿಸಿ ವಿಕಟವಿನೋದ ಮಾಡುತ್ತಿದ್ದ ಅಗ್ರಗಣ್ಯರಿವರು. ಇವರನ್ನು ಕುರಿತಂತೆ ಅನೇಕ ಕಥೆಗಳಿವೆ. ಕಾಳಿದಾಸ ಮಹಾಕವಿಯ 'ಕುಮಾರಸಂಭವ'ದ 'ಅನಂತರತ್ನಪ್ರಭವಸ್ಯ ಯಸ್ಯ...' ಪದ್ಯವನ್ನಾಗಲಿ ; ವಿವಾಹಾಂಗದ ಮಾಂಗಲ್ಯಧಾರಣವಿಧಿಯ 'ಮಾಂಗಲ್ಯಂ ತಂತುನಾನೇನ...' ಶ್ಲೋಕವನ್ನಾಗಲಿ, ವಿಲಕ್ಷಣವಾಗಿ ಅರ್ಥೈಸಿ ವಿವರಿಸಿರುವ ವಿವರಗಳು ಈಗಲೂ ಸಿಗುತ್ತವೆ.

ಒಮ್ಮೆ ಇವರು ನರಸರಾಜನೆಂಬ ಸಂಪನ್ನನ ಬಳಿ ಸತ್ಕಾರ್ಯವೊಂದಕ್ಕಾಗಿ ಧನಸಹಾಯವನ್ನು ಕೇಳಿ ಇಲ್ಲವೆನ್ನಿಸಿಕೊಂಡರು. ಆಗ ಆ ಕೃಪಣನನ್ನು ಗೇಲಿ ಮಾಡಲು ಮೇಲಿನ ಪದ್ಯವನ್ನು ಆಶುವಾಗಿ ಹೇಳಿ ಬಿಟ್ಟರು.

"ಯಜ್ಞಕ್ಕಾಗಿ ವೃಕ್ಷರಾಜನೆನಿಸಿದ ಅಶ್ವತ್ಥವನ್ನೂ, ಬಣ್ಣಗಳ ತಯಾರಿಕೆಗಾಗಿ ಭೃಂಗರಾಜವೆಂಬ ರಾಸಾಯನಿಕವನ್ನೂ, ತೂಗುವುದಕ್ಕಾಗಿ ತಕ್ಕಡಿಯನ್ನೂ ಬಳಸುತ್ತಾರೆ. ಆದರೆ ನರಸರಾಜನು ಮಾತ್ರ ಈ ಜಗತ್ತಿನಲ್ಲಿ ಯಾವುದಕ್ಕಾಗಿಯೂ ಪ್ರಯೋಜನವಾಗುವುದಿಲ್ಲ"

ಪ್ರಾಸಪಟುತ್ವವಾದ ಈ ಸೀಸಾಪದ್ಯ ಇಂದಿಗೂ ಅನೇಕರಿಗೆ ಅನ್ವಯವಾಗುವುದು ಬಹುಜನರಿಗೆ ಅನುಭವವೇದ್ಯ !

## –೭೩–

ಪೂತಪಾದಾನ್ವಯಾಬ್ಧೀಂದೋ! ಸ್ವಸ್ತಿ ನಾರಾಯಣಪ್ರಭೋ।
ನೇತ್ರೇ ಗಾತ್ರೇ ತಥಾ ಶ್ರೋತ್ರೇ ವಕ್ತ್ರೇ ಪುಷ್ಪೇಷುಶೋಭ ತೇ॥

ಆಂಧ್ರದ ವಿಜಯನಗರ ಸಂಸ್ಥಾನಾಧಿಪತಿ ನಾರಾಯಣಗಜಪತಿಯವರ
ಆಸ್ಥಾನಕ್ಕೆ ಒಬ್ಬ ವಿದ್ವಾಂಸರು ಬಂದು ದ್ವೈತವೇದಾಂತವನ್ನು ಕುರಿತು
ಉಪನ್ಯಾಸಿಸುತ್ತಾ ಭೇದವು ಶ್ರುತಿಸಿದ್ಧವೆಂದು ಹಲವು ವೇದವಾಕ್ಯಗಳನ್ನು ಹೇಳಿ
ಕಡೆಗೆ "ಭಿದಾ ಸತ್ಯಂ ಭಿದಾ ಸತ್ಯಂ" ಎಂದು ತ್ರೈಸ್ವರ್ಯದ ಹಾಡಿನಲ್ಲಿ ಶ್ರುತಿ
ಸದೃಶವಾಗಿ ಸ್ವಕಪೋಲಕಲ್ಪಿತ ವಾಕ್ಯವನ್ನೂ ವೇದವೆಂಬಂತೆ ಹೇಳಿ ಸಿದ್ಧಾಂತಿ
ಸಿದರಂತೆ. ಆ ಸಭೆಗೆ ಪ್ರಚ್ಛನ್ನವಾಗಿ ಬಂದಿದ್ದ ಮಂಗಳೇಶ್ವರ ಶಾಸ್ತ್ರಿಗಳು
ಇದನ್ನು ಕೇಳಿದೊಡನೆಯೇ ಈ ಸೂಕ್ತವನ್ನು ಗ್ರಹಿಸಿ ಕುಳಿತಲ್ಲಿಂದಲೇ ಉಚ್ಚ
ಸ್ವರದಿಂದ "ಭಿದಾ ಸತ್ಯಮಿತಿ ಯೋ ವದತಿ ಸ ಚಂಡಾಲೋ ಭವತಿ ಸ
ಚಂಡಾಲೋ ಭವತಿ ಸ ಚಂಡಾಲೋ ಭವತಿ" ಎಂದು ಆ ಪಂಡಿತರಿಗಿಂತಲೂ
ಸ್ವರಸಾಮರ್ಥ್ಯದಿಂದ ವೇದದ ಘೋಷವೆಂಬಂತೆ ತಮ್ಮದೇ ವಾಕ್ಯವನ್ನು
ಸಮಯಸ್ಫೂರ್ತಿಯಿಂದ ಹೇಳಿದರಂತೆ. ಎಲ್ಲರೂ ದಿಗ್ಭ್ರಾಂತರಾಗಿ ಆ
ಶಾಸ್ತ್ರಿಗಳನ್ನು ಗುರುತಿಸಿದರು. ರಾಜನೂ ಈ ಮುನ್ನ ನೋಡಿ ಪರಿಚಯ
ವಿಲ್ಲದೆ, ಕೇವಲ ಶ್ರುತಮಾತ್ರರಾಗಿದ್ದ ಶಾಸ್ತ್ರಿಗಳನ್ನು ಆದರಿಸಿದರು. ಆಗಂತುಕ
ವಿದ್ವಾಂಸರಿಗೂ, ಶಾಸ್ತ್ರಿಗಳಿಗೂ ಅವರು ಹೇಳಿದ ವಾಕ್ಯ ಎಲ್ಲಿದೆಯೆಂದು ರಾಜ
ಕೇಳಿದಾಗ ಪ್ರತ್ಯುತ್ಪನ್ನಮತಿ ಮಂಗಳೇಶ್ವರ ಶಾಸ್ತ್ರಿಗಳು ಕೂಡಲೇ ಹೇಳಿದ
ರಂತೆ; "ಪ್ರಭೋ! ಇಬ್ಬರೂ ಹೇಳಿದ್ದು ವೇದವಾಕ್ಯವೇ! ಅವೆರಡೂ ಎಲ್ಲಿ
ಬರುವುದೆಂಬುದು ಆ ಪಂಡಿತರಿಗೆ ಸರಿಯಾಗಿ ತಿಳಿಯದೇನೋ. ಏಕೆಂದರೆ
ಅವರು ಹೇಳಿದ್ದು ವಸ್ತುತಃ ಪೂರ್ವಪಕ್ಷವಾಕ್ಯ. ನಾನು ಹೇಳಿದ್ದು ಸಿದ್ಧಾಂತ
ವಾಕ್ಯ. ಪಾಪ! ಅವರು ಪೂರ್ವಪಕ್ಷದವರೆಗೆ ಮಾತ್ರ ಓದಿದ್ದಾರೇನೋ!
ಅವರನ್ನೇ ಕೇಳಿ, ಅತ ಉದಾಹರಿಸಿದ ಶ್ರುತಿವಾಕ್ಯವು ಯಾವ ಸಂಹಿತೆಯ
ಎಷ್ಟನೆಯ ಕಾಂಡದ ಯಾವ ಪ್ರಪಾಠಕದ ಹನ್ನೆಂದು?" ಆ ನೂತನ
ಪಂಡಿತರಿಗೆ ಬಂದೊದಗಿದ ಸ್ಥಿತಿ ವರ್ಣಿಸಬೇಕಾಗಿಲ್ಲ.

ಇಂಗಿತಜ್ಞನಾದ ರಾಜನೂ, ಸಭಾವಿದ್ವಾಂಸರೂ ಯಥಾರ್ಥವನ್ನು ತಿಳಿದ ಬಳಿಕ ಅಂದಷ್ಟೇ ಎದುರು ಕಾಣಿಸಿದ ಮಂಗಳೇಶ್ವರಶಾಸ್ತ್ರಿಗಳಿಗೆ ರಾಜನಿಂದ ಘನಸನ್ಮಾನವಾಯಿತು. ಆಗ ಮಂಗಳೇಶ್ವರಶಾಸ್ತ್ರಿಗಳು ಆ ಸಂಸ್ಥಾನಾಧಿಪತಿಯನ್ನು ಆಶೀರ್ವದಿಸಿ ಹೇಳಿದ ಆಶುಕವಿತೆಯೇ ಮೇಲಣ ಶ್ಲೋಕ.

"ಪೂಷವಾಡವಂಶಸಾಗರದ ಸುಧಾಕರನೇ ! ನಾರಾಯಣಪ್ರಭುವೇ ! ಮನ್ಮಥಸದೃಶನೇ ! (ಪುಷ್ಪೇಷುಶೋಭ) ನಾಯಕನೂ, ಕೀರ್ತಿತನೂ, ಕೇಳುಗನೂ (ಸದ್ವಿಚಾರಗಳ ಶ್ರೋತೃ) ವಾಗ್ಮಿಯೂ ಆದ ನಿನಗೆ ಮಂಗಳವಾಗಲಿ"

ವಸ್ತುತಃ ಈ ಶ್ಲೋಕದ ತಾತ್ಪರ್ಯ ಸರಳವಾದರೂ ಶಾಬ್ದಿಕವಾಗಿ ಅತಿಶಯತ್ವ ಇಲ್ಲಿದೆ. ನೇತ್ರೇ, ಗಾತ್ರೇ, ಶ್ರೋತ್ರೇ, ವಕ್ತ್ರೇ ಎಂಬ ಪದಗಳು ಅಕಾರಾಂತ ಸಪ್ತಮೀವಿಭಕ್ತಿಯಲ್ಲಲ್ಲದೆ ಋಕಾರಾಂತ ಚತುರ್ಥೀವಿಭಕ್ತಿಯಲ್ಲಿವೆ. ಇಷ್ಟೇ ಅಲ್ಲದೆ 'ಪುಷ್ಪೇಷು+ಶೋಭತೇ' ಎಂದು ವಿಂಗಡಿಸದೆ 'ಪುಷ್ಪೇಷುಶೋಭ+ತೇ' ಎಂದೂ; 'ತೇ' ಎಂಬುದನ್ನು ಚತುರ್ಥೀವಿಭಕ್ತಿಯ ಏಕವಚನವೆಂದೂ ಸಮನ್ವಯಿಸಿ ವ್ಯಾಕರಣಸೂಕ್ಷ್ಮವನ್ನು ಅರಿಯದಿದ್ದಲ್ಲಿ ಇಡಿಯ ಪದ್ಯವು "ಎಲೈ ಪ್ರಭುವೇ ! ನಿನ್ನ ಕಣ್ಣಲ್ಲಿ, ಮೈಯ್ಯಲ್ಲಿ, ಕಿವಿಯಲ್ಲಿ, ಬಾಯಲ್ಲಿ ಹೂವುಗಳಲ್ಲಿ ಶೋಭಿಸುತ್ತವೆ" ಎಂಬ ಅರ್ಥಶೂನ್ಯವಿಕೃತಿ ಬರುತ್ತದೆ.

'ಇಂಥ 'ಅಪವಾಕ್ಯಾಭ್ಯಾಸ' ಚಮತ್ಕಾರವು ಇಲ್ಲಿರುವುದು ಶಾಸ್ತ್ರಿಗಳ ವ್ಯಾಕೃತಿವೈಭವಕ್ಕೆ ಸಾಕ್ಷಿ. ಪ್ರಾಚೀನ ಪಂಡಿತಕಾವ್ಯಗಳಲ್ಲಿ ಈ ಬಗೆಯ ಅಪಶಬ್ದಾಭಾಸ ಚಾತುರ್ಯವು ಗಣೆಕಾರನು ಜಾರಿಬೀಳುವನೆಂಬಂತೆಯೇ ನಟಿಸುತ್ತಾ ಜಾರದೆ ಕಸರತ್ತು ಮಾಡಿ ಇಮ್ಮಡಿ ಮೆಚ್ಚುಗೆ ಪಡೆಯುವಂತೆ ಬಹುಧಾ ಕಾಣಿಸುತ್ತದೆ.

—೭೩—

ಮಾಣಿಕ್ಯಕ್ರಯಣಂ ಲೋಕೇ ಮಂಗಳಾಯ ಭವೇತ್ಕಿಲ ।
ಮಂಗಳೇ ಸಹಜೇऽಸ್ಮಾಕಂ ಮಾಣಿಕ್ಯಾತ್ಕಿಂ ಪ್ರಯೋಜನಂ ॥

ಮಂಗಳೇಶ್ವರ ಶಾಸ್ತ್ರಿಗಳಿಗೆ ಗೌರವಾರ್ಹರಾದ ಅಣ್ಣಂದಿರು ಶ್ರೀ ರುಕ್ಮೇಶ್ವರಶಾಸ್ತ್ರಿಗಳು. ಇವರಿಗೂ ಪ್ರತಿಭಾ–ವ್ಯುತ್ಪತ್ತಿಗಳು ಪೂರ್ಣ ಪ್ರಮಾಣದಲ್ಲಿದ್ದವು. ಒಮ್ಮೆ ಕಾರ್ಯವಶಾತ್ ಇವರಿಬ್ಬರೂ ವಿಶಾಖ ಪಟ್ಟಣಕ್ಕೆ ಬಂದು ಕೆಲವು ಕಾಲ ಸ್ವಯಂಪಾಕಿಗಳಾಗಿ ನಿಲ್ಲಬೇಕಾಯಿತು. ಆಗ ಒಂದು ಹೊತ್ತು ರುಕ್ಮೇಶ್ವರಶಾಸ್ತ್ರಿಗಳು ಅಡುಗೆಗಾಗಿ ತರಕಾರಿ ತರಲು ಹೊರಡುತ್ತಾ, ತಮ್ಮನಿಗೆ 'ನಾನು ತಂದ ತರಕಾರಿಗಳಲ್ಲಿ ರಂಧ್ರಾನ್ವೇಷಿಸುತ್ತೀಯೆ. ಹೀಗಾಗಿ ನಿನ್ನ ಇಷ್ಟವನ್ನು ತಿಳಿಸು, ನೀನೇನು ಕೋರುವೆಯೋ ಅದನ್ನೇ ನಾನು ತರುವೆ' ಎಂದರು. ಆಗ ಕಿಂಚಿತ್ ಕೋಪಗೊಂಡು ಮಂಗಳೇಶ್ವರಶಾಸ್ತ್ರಿಗಳು ಹೀಗೆಂದರು 'ನಾನು ಬಯಸಿದ್ದನ್ನೆಲ್ಲ ತರುವಿರಾದರೆ ಮಾಣಿಕ್ಯವನ್ನೇ ತನ್ನಿ !' ಕೂಡಲೇ ರುಕ್ಮೇಶ್ವರಶಾಸ್ತ್ರಿಗಳು ಕಿರುನಗೆಯಿಂದ ಮೇಲಿನ ಶ್ಲೋಕವನ್ನು ಆಶೂತ್ತರವಾಗಿ ಹೇಳಿದರು.

"ಮಾಣಿಕ್ಯವನ್ನು ಸಾಮಾನ್ಯವಾಗಿ ಜನರು ಒಳಿತಾಗಲೆಂದು (ತಮ್ಮ ಜಾತಕಾದಿಗಳ ಲಕ್ಷಣಾನುಸಾರ ರತ್ನಶಾಸ್ತ್ರದ ನಿಯಮದಂತೆ ಶುಭಪ್ರಾಪ್ತಿಗಾಗಿ) ಕೊಳ್ಳುವರಷ್ಟೇ ; ಮಂಗಳವೇ (ಮಂಗಳೇಶ್ವರಶಾಸ್ತ್ರಿಯೇ) ನಮ್ಮಲ್ಲಿ ಇರಲು ಮಾಣಿಕ್ಯದಿಂದ ಏನು ಪ್ರಯೋಜನ ?"

ಮಂಗಳವೆಂದರೆ ಶುಭ, ಮಂಗಳೇಶ್ವರಶಾಸ್ತ್ರಿ ಎಂಬರ್ಥಗಳು ಮಾತ್ರವಲ್ಲದೆ ಪಾಪಗ್ರಹವೂ, ಕ್ರೂರವೂ ಆದ ಅಂಗಾರಕ ಎಂಬ ಅರ್ಥವೂ ಉಂಟೆಂಬ ಹಿನ್ನೆಲೆಯಲ್ಲಿ ಈ ಶ್ಲೋಕವನ್ನು ಗಮನಿಸಿದಾಗ ರುಕ್ಮೇಶ್ವರ ಶಾಸ್ತ್ರಿಗಳ ವಾಚೋವೈಚಿತ್ರ್ಯದ ಅರಿವಾಗುತ್ತದೆ.

—೭೪—

ಭೂತ್ವಾ ಪೌಲ್ಕಸಕಾತ್ ಪ್ರಪದ್ಯ ರಜಕಾನಾಭಾಷ್ಯ ಪೌರಾಣಿಕಾನ್
ಗಾನಸ್ಥಾನಮುಪೇತ್ಯ ಚಾಟುಕರಣಾನಾಲಿಂಗ್ಯ ನತ್ವಾ ಕವೀನ್ ।
ವೇಶ್ಯಾಸದ್ಮನಿ ಸಂಪ್ರವಿಶ್ಯ ಚ ಗತಾ ವೈದ್ಯಸ್ಯ ಪ್ರಾಣಿಗ್ರಹಂ
ಭೂಯೋ ಹಂತ ಸುವರ್ಣಕಾರಸದನೇ ಸಾನಂದಮಾಸ್ತೇ ಮೃಷಾ ॥

ನಡಿಮಿಂಟಿ ಮಂಗಳೇಶ್ವರಶಾಸ್ತ್ರಿಗಳ ಮಗಳಿಗೆ ಮದುವೆಯ ಸಮಯದಲ್ಲಿ ಸ್ವರ್ಣಾಭರಣಗಳನ್ನು ಮಾಡಿಸುವಾಗ ಚಿನಿವಾರನಿಂದ ತುಂಬ ತೊಂದರೆಯಾಯಿತು. ಹೇಗೋ ಕಷ್ಟಪಟ್ಟು ಶುಭಕಾರ್ಯವನ್ನು ಮುಗಿಸಿದ ಬಳಿಕ ತಮ್ಮ ಅಭಿಮಾನದೈವತವಾದ ಶ್ರೀದಕ್ಷಿಣಾಮೂರ್ತಿಯ ಕಾಂಚನವಿಗ್ರಹವನ್ನು ಪರಿಷ್ಕಾರಕ್ಕಾಗಿ ಅದೇ ಚಿನಿವಾರನಿಗೆ ಕೊಡಬೇಕಾಯಿತು. ಅವನು ಶುದ್ಧ ಕನಕವನ್ನು ನುಂಗಿ ಬಳಿಕ ಶಾಸ್ತ್ರಿಗಳಿಗೆ ಇಂದು-ನಾಳೆ-ನಾಡಿದ್ದು ಎನ್ನುತ್ತಾ ಅಲೆಯಿಸಿ ಕಡೆಗೆ ಮೋಸವನ್ನು ಮಾಡಿದ. ಆಗ ದುಃಖಾಮರ್ಷಭರಿತರಾದ ಶಾಸ್ತ್ರಿಗಳು ಮೇಲಿನ ಶಾರ್ದೂಲವಿಕ್ರೀಡಿತವೃತ್ತವನ್ನು ಆಶುವಾಗಿ ಹೇಳಿ ಪಂಚಾಯಿತಿ ಸೇರಿಸಿ ನ್ಯಾಯವನ್ನು ಪಡೆದರು. ಅವರಂದು ಪಠಿಸಿದ ಪದ್ಯ ಹೀಗಿದೆ ; "ಶ್ವಪಚತನದಿಂದ ಹುಟ್ಟಿ, ಅಗಸರಲ್ಲಿ ಶರಣಾಗಿ, ಪೌರಾಣಿಕಭಟ್ಟರಲ್ಲಿ ಸಲ್ಲಪಿಸಿ, ಗಾಯಕರನ್ನು ಸೇರಿ, ಶಾನುಭೋರನ್ನು ತಬ್ಬಿ, ಕವಿಗಳಿಗೆ ನಮಿಸಿ, ಸೂಳೆಗೇರಿಯಲ್ಲಿ ಸುಳಿದು, ವೈದ್ಯರೊಡನೆ ಪರಿಣಯಿಸಿ ಕಡೆಗೆ : ಅಯ್ಯಯ್ಯೋ ! ಅನೃತಾಂಗನೆಯು ಅಕ್ಕಸಾಲಿಗರ ಮನೆಯಲ್ಲಿ ಆನಂದವಾಗಿ ನೆಲೆಸಿದ್ದಾಳೆ !!"

ಈ ಪದ್ಯದ ಚಾಟು ಚಮತ್ಕಾರ, ಗಾಢಶೋಕಾನುಭವ ಎರಡೂ ಉಪಾದೇಯವಾಗಿದೆ.

—೭೫—

ನಾರಾಯಣಸ್ಯ ಶಯ್ಯಾಯಾಂ ಭೋಜನಂ ಸ್ಯಾತ್ತು ನೋಚಿತಂ ।
ಕಥಂ ಸಾಧು ತದೀಯಾದಿದನ್ಯಭಕ್ಷಣಮೇವ ಹಾ ॥

ಮಂಗಳೇಶ್ವರಶಾಸ್ತ್ರಿಗಳೊಮ್ಮೆ ಪುರಿಯ ಜಗನ್ನಾಥನ ದರ್ಶನಕ್ಕಾಗಿ ತೆರಳಿದರು. ಅಲ್ಲಿ ದೇವಾಲಯದ ಅನ್ನಸಂತರ್ಪಣೆಗೆ ಹೋದಾಗ ಊಟದೆಲೆ ಸಿಗಲಿಲ್ಲ. ಹತ್ತಿರದಲ್ಲಿಯೇ ಸೊಂಪಾಗಿ ಎಲೆಗಳಿಂದ ಕೂಡಿ ಅಕ್ಷತವಾಗಿ ಬೆಳೆದಿದ್ದ ವಟವೃಕ್ಷವನ್ನು ಕಂಡು ಕೂಡಲೇ ಹುರುಪಿನಿಂದ ಅದರ ಎಲೆಗಳನ್ನು ಕಿತ್ತು ಊಟದೆಲೆಯನ್ನು ಹಚ್ಚಿಕೊಂಡು ಶಾಸ್ತ್ರಿಗಳು ಉದರಪೂಜೆಗೆ ಸಿದ್ಧರಾದರು. ಆದರೆ ಅವರ ಈ ಕೃತ್ಯವನ್ನು ಕಂಡು ಅಕ್ಕಪಕ್ಕದಲ್ಲಿ ಬಾಳೆಯೆಲೆಗಳ ಮುಂದೆ ಕುಳಿತಿದ್ದ ಗೌಡ (ಬಂಗಾಳಿ) ಬ್ರಾಹ್ಮಣರು ಹಾಹಾಕಾರ ಮಾಡಿದರು! ಶಾಸ್ತ್ರಿಗಳು ಸವಿಸ್ಮಯರಾಗಿ ಕಾರಣವನ್ನು ಕೇಳಿದಾಗ "ಶ್ರೀ ಮನ್ನಾರಾಯಣನ ಶಯ್ಯೆಯಲ್ಲಿ ಊಟಮಾಡಿ ಅದನ್ನು ಎಂಜಲಿನಿಂದ ಅಪವಿತ್ರಮಾಡುವುದು ಸರಿಯೇ" ಎಂದು ಧಿಕ್ಕರಿಸಿದರು. ಕೂಡಲೇ ಹಾಸ್ಯ ಪ್ರಜ್ಞೆಯ ನಿಶಿತಮತಿ ಕೆರೆ ಶಾಸ್ತ್ರಿಗಳು ಮೇಲಣ ಶ್ಲೋಕವನ್ನು ಆಶುವಾಗಿ ಹೇಳಿದರು.

"ನಾರಾಯಣನ ಹಾಸಿಗೆಯಲ್ಲಿ (ಆಲದೆಲೆಯಲ್ಲಿ ಕೃಷ್ಣ ಮಲಗಿರುವನೆಂಬ ಕಲ್ಪನೆ ಪುರಾಣಪ್ರಖ್ಯಾತ) ಊಟಮಾಡುವುದು ಸರಿಯಲ್ಲದಿರಬಹುದು. ಆದರೆ ನಾರಾಯಣನ ಆದಿಮಾವತಾರವನ್ನೇ (ಮತ್ಸ್ಯಾವತಾರ) ತಿಂದು ತೇಗುವುದು ಸರಿಯೇ ?"

ಬಂಗಾಳಿಬ್ರಾಹ್ಮಣರು ಮತ್ಸ್ಯಭಕ್ಷಕರೆಂಬುದು ಲೋಕಪ್ರಸಿದ್ಧ ಸತ್ಯ. ಇದನ್ನು ಎತ್ತಿ ಗೇಲಿಮಾಡಿದ ಮೇಲೆ ಶಾಸ್ತ್ರಿಗಳ ಆಕ್ಷೇಪಕರು ನಿರುತ್ತರರಾಗಿ ತಲೆ ತಗ್ಗಿಸಬೇಕಾಯಿತು. ಕ್ಷೇಮೇಂದ್ರನಿಂದ ಮೊದಲ್ಗೊಂಡು ಗೌಡದೇಶದ

(ಬಂಗಾಳದ) ಬ್ರಾಹ್ಮಣರ ಕಟುವಿಡಂಬನವು ಶಾಸ್ತ್ರಿಗಳವರೆಗೂ ಸಾಗುವುದಿರಲಿ, ಮುಂದೆ ಶಾಕ್ತಕಂಠರಿಂದಲೂ 'ಅಮೀ ನ ಮೀನವ್ಯಸನಂ ತ್ಯಜಂತಿ' ಎಂದು ಚಮತ್ಕರಿಸುವುದರಲ್ಲಿ ಪರ್ಯವಸಿಸಿತು.

—೭೬—

ಚೋರಸ್ಸದ್ಯೋಽರ್ಧ್ವಭೇದಾವರರವಿಘಟನಾತ್ತತ್ರ ಘಾಣಾಪ್ರಬಾನಾ-
ದೇಡೂಕಚ್ಛೇದನಾದ್ವಾ ವಿಶತಿ ಯದಿ ಗೃಹಂ ತತ್ರ ನೋ ನೋ ವಿಚಾರಃ।
ಕಿಂ ತ್ವಸ್ಮಾಕಂ ಸುರಂಗಾಕಲನಯತಿ ಪುರೇ ಘೋಷಯಾಮಾಸ ಯಸ್ಮಾ-
ತ್ತಸ್ಮಾದೇತತ್ಸುರಂಗಾಧಿಪ ಇತಿ ಬಿರುದಂ ಪ್ರೋಚುರೇತತ್ಪುರಸ್ಥಾಃ ॥

ಆಂಧ್ರಪ್ರದೇಶದ ಬೊಬ್ಬಿಲಿಸಂಸ್ಥಾನದ ಒಂದು ಗ್ರಾಮದಲ್ಲಿ ಯಾರೋ ಒಬ್ಬ ಸಂಪನ್ನನ ಮನೆಯು ಕಳ್ಳರ ದಾಳಿಗೆ ಒಳಗಾಗಿ ಇದ್ದ ಸೊತ್ತೆಲ್ಲ ಕಳ್ಳರ ಪಾಲಾಯಿತು. ಆಗ ಸಂಸ್ಥಾನಾಧಿಪನಿಗೆ ಆ ಮನೆಯ ಒಡೆಯನು ಮೊರೆಯಿಟ್ಟು ಇಂಥ ಚೋರರನ್ನು ಹಿಡಿದು ಶಿಕ್ಷಿಸಬೇಕೆಂದು ಆಗ್ರಹಪೂರ್ವಕವಾಗಿ ಒತ್ತಾಯಿಸಿದನು. ಆದರೆ ವಿಲಾಸಿಯೂ, ಮೂರ್ಖನೂ ಆದ ಸಾಂಸ್ಥಾನಿಕನು ಕನ್ನ ಹಾಕದೆಯೇ ಮಾಡಿದ ಕಳ್ಳತನವು ಚೌರ್ಯದ ಪರಿಧಿಗೇ ಬರುವುದಿಲ್ಲವೆಂದು ಅಹವಾಲನ್ನು ನಿರಾಕರಿಸಿದ್ದಲ್ಲದೆ ಇನ್ನು ಮುಂದೆ ಕನ್ನವಿಕ್ಕದೆ ಮಾಡಿದ ಕಳ್ಳತನಗಳ ಬಗೆಗೆ ಫಿರ್ಯಾದಿಯನ್ನು ಕೇಳುವುದೂ ಇಲ್ಲವೆಂದು ಡಂಗೂರ ಸಾರಿಸಿದ. ಈ ಹುಚ್ಚುತನವನ್ನು ಕಂಡು ಕನಲಿದ ಮಂಗಳೇಶ್ವರಶಾಸ್ತ್ರಿಗಳು ಕವಿತೆಯ ಮೂಲಕ ಆ ಬೆಪ್ಪದೊರೆಯನ್ನು ಗೇಲಿಮಾಡಲು ಲೇಖನಿಯನ್ನೆತ್ತಿದಾಗ ಹೊಮ್ಮಿದ್ದೇ ಮೇಲಣ ಸ್ರಗ್ಧರಾವೃತ್ತದ ಪದ್ಯ.

"ಕಳ್ಳನು ಸೂರನ್ನು ಮುರಿದಾಗಲಿ, ಅಗುಳಿಯನ್ನು ಒಡೆದಾಗಲಿ, ಜಗಲಿಯನ್ನು ಅಗೆದಾಗಲಿ, ಹಿತ್ತಿಲಗೋಡೆಯನ್ನು ಉರುಳಿಸಿಯಾಗಲಿ ಮನೆ

ಯೊಳಗೆ ಹೊಕ್ಕರೆ ನಮಗೆ ಚಿಂತೆಯಿಲ್ಲ. ಆದರೆ ಸುರಂಗ(ಕನ್ನ)ವನ್ನು ಹಾಕಿದರೆ ಮಾತ್ರ ವಿಚಾರಿಸುತ್ತೇವೆಂದು ಈತನು ಡಂಗೂರ ಸಾರಿಸಿದ್ದರಿಂದ ಊರಿನವರೆಲ್ಲರೂ ಈತನಿಗೆ "ಸುರಂಗಾಧಿಪ" ಎಂದು ಬಿರುದನ್ನಿತ್ತರು"

ವಸ್ತುತಃ ಆ ಸಾಂಸ್ಥಾನಿಕನ ಹೆಸರು ರಂಗಾಧಿಪ. ಸು+ರಂಗಾಧಿಪ ಎಂಬ ಶ್ಲೇಷದಿಂದ ವನ್ಯರ ಕಟುಕಿ ಮತ್ತಷ್ಟು ಮೊನಚಾಗಿದೆ.

—೭೭—

ಅನ್ಯೈರನ್ಯೈಃ ಶತಾತ್ ಕೃತಿಸ್ತ್ವಯಮಿಯಂ ಗೂಢಾರ್ಥವರ್ತ್ಮ್ಯಯುತಾ
ಕರ್ತವ್ಯೇತಿ ಸಮಂವಿದಪ್ಯತಿಚಿರಶ್ರಾಂತೋ ಮತಿಕ್ಷೋಭತಃ ।
ವಿಶ್ರಾಂತೋಽಸ್ಯ ವಶಿಷ್ಟಮರ್ಧಶತಕಂ ಸಂಗೃಹ್ಯ ಮತ್ಸಂವಿದಾ
ಸಾರ್ಧಂ ಯಃ ಪರಿಪೂರಯೇತ್ಕೃತಿಮಿಮಾಂ ತಸ್ಮೈ ಸಹಸ್ರಂ ನಮಃ ॥

ಚಾಮರಾಜನಗರದ ರಾಮಶಾಸ್ತ್ರಿಗಳು ಹತ್ತೊಂಬತ್ತನೆಯ ಶತಾಬ್ದದ ಅಂತ್ಯದಲ್ಲಿ ಮೈಸೂರಿನಲ್ಲಿದ್ದ ಘನಪಂಡಿತರು. ಸಹೃದಯಶಿರೋಮಣಿಗಳೂ ಆದ ಈ ಮಹನೀಯರಿಗೆ ಕವಿತಾರಚನೆ ಸುಲಭವೇ ಆಗಿದ್ದರೂ ಉದ್ಯಮ ವೆಂಬಂತೆ ಕೈಗೊಳ್ಳಲು ಮನಸ್ಸಿರಲಿಲ್ಲ. ಒಮ್ಮೆ ಪಂಡಿತಮಂಡಲಿಯಲ್ಲಿ 'ಭಮ್ರಿ: ರಂಭೋರು ತ್ರಿದಶವದನಗ್ಲಾನಿರಧುನಾ...' ಎಂಬ ಚಮತ್ಕಾರ ಶ್ಲೋಕದ ಪ್ರಸ್ತಾವ ಬಂದಾಗ ರಾಮಶಾಸ್ತ್ರಿಗಳು ಅದನ್ನು ಲಘುವಾಗಿ ವಿಮರ್ಶಿಸಿದರಂತೆ. ಆಗ ಪ್ರತ್ಯರ್ಥಿಗಳು 'ಗೇಲಿ ಸುಲಭ, ಆದರೆ ಇಂಥ ಚಿತ್ರಕೃತಿರಚನೆ ಕಷ್ಟ, ನಿಮಗಿದು ಅಸಾಧ್ಯ' ಎಂದಾಗ ಆ ಕೆಣಕಿಗೆ ಕೆರಳಿದವರು "ಸೀತಾರಾವಣಸಂವಾದಝರೀ" ಎಂಬ ಅತ್ಯದ್ಭುತ ಚಿತ್ರಕಾವ್ಯವನ್ನು ರಚಿಸಿದರು. ಇದು ಚಿತ್ರಮಾರ್ಗದ್ದಾದರೂ ಅತಿಸರಸಕೃತಿ. ಸೀತೆಯನ್ನು ರಾವಣ ಪ್ರಲೋಭಿಸುವುದೇ ವಸ್ತು. ಪ್ರತಿಪದ್ಯದ ಮೂರು ಸಾಲುಗಳಲ್ಲಿ ರಾವಣನ ಅಭ್ಯರ್ಥನೆ-ರಾಮನಿಂದೆ ಕೂಡಿದ ನುಡಿಗಳಿಗೆ ನಾಲ್ಕನೆಯ

ಸಾಲಿನಲ್ಲಿ ಸೀತೆಯ ಪ್ರತ್ಯುತ್ತರ ಮೊನಚಾಗಿ ಬರುತ್ತದೆ. ಈ ಸಾಲಿನಲ್ಲಿ ಗೂಢವಾಗಿರುವ ಒಂದು ಸೂಚನೆಯನ್ನನುಸರಿಸಿ ಉಳಿದ ಮೂರುಸಾಲುಗಳನ್ನು ಚ್ಯುತಾಕ್ಷರೀ, ದತ್ತಾಕ್ಷರೀ ಅಥವಾ ಚ್ಯುತದತ್ತಾಕ್ಷರೀ ವಿಧಾನಗಳಿಂದ ಬದಲಿಸಿದರೆ ಆಗ ರಾವಣನ ನುಡಿಗಳೆಲ್ಲ ಅವನಿಗೆ ನಿಂದೆ, ಅಥವಾ ರಾಮಪ್ರಶಂಸೆಯಲ್ಲಿ ಪರ್ಯವಸಿಸುತ್ತವೆ. ಇಂಥ ಚಮತ್ಕಾರವಿಶೇಷವುಳ್ಳ ನೂರು ಪದ್ಯಗಳನ್ನು ರಚಿಸಬೇಕೆಂದಿದ್ದರೂ ವಯೋಭಾರದಿಂದಾಗಿ ಸಾಗದೆ ರಾಮಶಾಸ್ತ್ರಿಗಳು ಐವತ್ತಕ್ಕೇ ನಿಲ್ಲಿಸಿ ಮೇಲಿನ ಪದ್ಯವನ್ನು ಹೇಳಿದರು ;

"ಗೂಢಾರ್ಥವಿರುವ ಶತಕವನ್ನಾಗಿ ಇದನ್ನು ರೂಪಿಸಲೆಳಸಿದೆನಾದರೂ ಮೈಮನಸ್ಸುಗಳು ಬಳಲಿ ಸಾಧ್ಯವಾಗುತ್ತಿಲ್ಲ. ಉಳಿದರ್ಧವನ್ನು ಯಾರಾದರೂ ಪೂರೈಸಿದರೆ ಆ ಮಹಾನುಭಾವರಿಗೆ ನನ್ನ ಸಾವಿರ ನಮನಗಳು"

ಇದಾದ ಕೆಲಕಾಲಕ್ಕೇ ರಾಮಶಾಸ್ತ್ರಿಗಳ ಆಪ್ತಶಿಷ್ಯರೇ ಆದ ಶ್ರೀಸೀತಾರಾಮಶಾಸ್ತ್ರಿಗಳು ಮತ್ತೂ ರಸಭರಿತವಾಗಿ ಉಳಿದ ಐವತ್ತು ಪದ್ಯಗಳನ್ನು ರಚಿಸಿ ಗುರುನಿವೇದನೆ ಮಾಡುತ್ತಾ, ಮೇಲಿನ ಪದ್ಯವನ್ನು ಪ್ರಸ್ತಾವಿಸುತ್ತಾ ತಮ್ಮ ಕೃತಿಯಲ್ಲಿ "ಗುರುಗಳು ನೂರೇನು, ಸಾವಿರಪದ್ಯಗಳನ್ನೇ ಈ ರೀತಿ ರಚಿಸಬಲ್ಲವರಾಗಿದ್ದರೂ, ನನ್ನಂಥವರಿಗೂ ಅವಕಾಶವಾಗಲೆಂದು ಅನುಗ್ರಹಾತ್ಮಕವಾಗಿ ಈ ಕೃತಿಯನ್ನು ಅರೆಯಾಗಿಸಿದ್ದಾರೆ. ಆದುದರಿಂದ ಪೂರೈಸಿದ ನನಗೆ ಸಾವಿರ ನಮಸ್ಕಾರ ಸಲ್ಲಬೇಕೆಂದರೆ ಅಪಚಾರ. ಅದಕ್ಕೆ ಬದಲು ಗುರುಗಳ ಈ ಪದ್ಯದ ಕೊನೆಯ ಮಾತು 'ಸಹಸ್ರಂ ನಮಃ' ಎಂದಲ್ಲದೆ 'ಸಹಸ್ರಾಶಿಷಃ' (ಸಾವಿರ ಆಶೀರ್ವಾದಗಳು) ಎಂದಿರಬೇಕು" ಎಂದು ಹೇಳಿದರು. ಇಂಥ ವಿನಯಶಾಲಿಯೂ, ವಿದ್ವಾಂಸನೂ ಆದ ಶಿಷ್ಯವರನನ್ನು ಪಡೆದ ರಾಮಶಾಸ್ತ್ರಿಗಳೇ ಧನ್ಯರು ! ಅವರಿಗೆ ಸಾವಿರ ನಮನಗಳನ್ನು ಸಲ್ಲಿಸುವುದಕ್ಕೆ ಬದಲಾಗಿ ಸಾವಿರ ನಮನಗಳನ್ನು ಒಪ್ಪಿಸಿಕೊಳ್ಳುವ ಯೋಗ ಬಂದಿತು ! !

—೭೮—

ಧ್ವಸ್ತಪ್ರಧ್ವಸ್ತಮನುಜಾಃ ಕ್ಷತವಿಕ್ಷತವಿಗ್ರಹಾಃ ।
ಶೀರ್ಣಪ್ರಶೀರ್ಣಪರ್ಯಂತಾ ನಾಸಿಕೇಯಂ ಭವಿಷ್ಯತಿ ॥

ಕಾವ್ಯಕಂಠ ವಾಸಿಷ್ಠ ಗಣಪತಿ ಮುನಿಗಳು ನವಭಾರತದ ವಿಭೂತಿ ಪುರುಷರಲ್ಲೊಬ್ಬರು. ಬಾಲ್ಯದಲ್ಲಿಯೇ ಭೃಂಗದೂತವೆಂಬ ಸಂಸ್ಕೃತಕಾವ್ಯವನ್ನು ರಚಿಸಿದ್ದ ಇವರ ಆಶುಕವಿತಾಧೋರಣೆ, ಅವಧಾನಶಕ್ತಿ ಅದ್ಭುತವಾದದ್ದು. ಆಂಧ್ರಮೂಲದ ಇವರು ತಪೋವ್ರತಕ್ಕಾಗಿ ಭಾರತವನ್ನು ಸುತ್ತುತ್ತಾ ನಾಸಿಕದ ಬಳಿಯ ತ್ರ್ಯಂಬಕ ಕ್ಷೇತ್ರದಲ್ಲಿ ತಮ್ಮ ಮೊದಲ ಅಷ್ಟಾವಧಾನವನ್ನು ನಡೆಸಿದಾಗ ಅವರಿಗೆ ಕೇವಲ ಹತ್ತೊಂಬತ್ತು ವರ್ಷ ವಯಸ್ಸು. ಆ ಸಂದರ್ಭದಲ್ಲೊಮ್ಮೆ ನಾಸಿಕದ ಹೊರವಲಯದಲ್ಲಿ ತಪಸ್ಸಿಗೆ ಅನುಕೂಲ ಕ್ಷೇತ್ರವನ್ನರಸಿ ಲಕ್ಷ್ಮಣದೇವಾಲಯಕ್ಕೆ ಹೋದಾಗ ಇದ್ದಕ್ಕಿದ್ದಂತೆಯೇ ಅಲ್ಲಿಯ ಅರ್ಚಕನೊಬ್ಬ ಗಣಪತಿ ಮುನಿಗಳನ್ನು ಕಳ್ಳನೆಂದು ಭಾವಿಸಿ ಕ್ರೂರವಾಗಿ ಹೊಡೆದು ಬಡಿದು ನ್ಯಾಯಾಸ್ಥಾನಕ್ಕೆ ಎಳೆದೊಯ್ಯಲು ಮುಂದಾದ. ಕೆಲವು ಸಜ್ಜನರಿಂದಾಗಿ ಗಣಪತಿಮುನಿಗಳಿಗೆ ಆ ಕಂಟಕ ತೀರಿತಾದರೂ ದೈಹಿಕವಾಗಿ, ಮಾನಸಿಕವಾಗಿ ತೀರದ ವ್ಯಥೆಯುಂಟಾಗಿದ್ದ ಕಾರಣ ಕೋಪಾವೇಶದಿಂದ ಮೇಲಿನ ಶ್ಲೋಕ ಶಾಪೋಕ್ತಿಯಾಗಿ ಹೊರಟಿತು. "ಸಂತ್ರಸ್ತರೂ ಕ್ಷತರೂ ಗಾಯ-ರೋಗಗಳಿಂದ ಜರ್ಜರಿತಶರೀರಿಗಳೂ ಆದ ಮಾನವರಿಂದ ತುಂಬಿಹೋಗಿ ಈ ನಾಸಿಕಪುರವು ಸಂಕ್ಷೋಭೆಗೊಳ್ಳಲಿ !"

ಅಂತೆಯೇ ಎಪ್ಪತ್ತು ದಿನಗಳು ನಾಸಿಕದಲ್ಲಿ ಪ್ಲೇಗ್‌ರೋಗ ಹಾವಳಿ ನಡೆಸಿತು. ಆ ಅರ್ಚಕನೂ ಸೇರಿದಂತೆ ಅನೇಕರು ಸಕುಟುಂಬವಾಗಿ ನಶಿಸಿ ಹೋದರು !

ವಸಿಷ್ಠಾಪತ್ಯದ ಕವಿಯ ಕನಲಿಕೆ ಭಯಂಕರವಾಗಿ ಪರಿಣಮಿಸಿತ್ತು.

## —೭೯—

ಸತ್ವರಕವಿತಾಸವಿತಾ ಕಶ್ಚಿದ್ಗೌಡೋ ಹಮಂಬಿಕಾದತ್ತಃ
ಗಣಪತಿರಿತಿ ಕವಿಕುಲಪತಿರತಿದಕ್ಷೋ ದಾಕ್ಷಿಣಾತ್ಯೋಽಹಂ ॥

ಕಾವ್ಯಕಂಠ ವಾಸಿಷ್ಠಗಣಪತಿ ಮುನಿಗಳು ಬಾಲ್ಯದಿಂದಲೇ ಕವಿತಾ ನಿರ್ಮಿತಿಯಲ್ಲಿ ನಿಪುಣರು. ಶೀಘ್ರಕವಿತೆಯಲ್ಲಿ ಅಸಮಾನರಾದ ಅವರು ಕವಿತಾಸ್ಪರ್ಧೆಯಲ್ಲಿ ಜಯಗಳಿಸಲು ಎಳವೆಯಲ್ಲಿಯೇ ಬಂಗಾಳದ ನವದ್ವೀಪಕ್ಕೆ ಹೋದರು. ನವೀನನ್ಯಾಯದ ಆಡುಂಬೊಲವಾದ ನವದ್ವೀಪದಲ್ಲಿ ಶಾಲಿವಾಹನಶಕ 1823 ಜ್ಯೇಷ್ಠ ಅಷ್ಟಮಿಯಂದು ಕವಿತಾಪರೀಕ್ಷೆ ನಡೆಯಿತು.

ಸಭೆಗೆ ಕಾಲಿಡುತ್ತಿದ್ದಂತೆಯೇ ಅಂಬಿಕಾದತ್ತರೆಂಬ ಪ್ರೌಢಪಂಡಿತರು ತಮ್ಮ ಪರಿಚಯವನ್ನು ಮೇಲೆ ಕಾಣಿಸಿದ ಆರ್ಯಾಪದ್ಯದ ಪೂರ್ವಾರ್ಧದ ಮೂಲಕ ಹೀಗೆ ಮಾಡಿಕೊಂಡರು ; "ಶೀಘ್ರಕವಿತಾರಚನೆಯಲ್ಲಿ ಸೂರ್ಯನಂತಿರುವ ನಾನು ಅಂಬಿಕಾದತ್ತನೆಂಬ ಹೆಸರಿನ ಒಬ್ಬಾನೊಬ್ಬ ವಂಗೀಯ". ಪ್ರಾಸಪಟ್ಟಿಪ್ಪವಾದ ಈ ಪೂರ್ವಾರ್ಧಕ್ಕೆ ಒಡನೆಯೇ ತದಧಿಕವಾದ ಉತ್ತರಾರ್ಧವನ್ನು ಸೇರಿಸುತ್ತಾ ಗಣಪತಿಮುನಿಗಳು ತಮ್ಮ ಪರಿಚಯವನ್ನು ಹೀಗೆ ಹೇಳಿದರು; "ಗಣಪತಿಯೆಂಬ ಕವಿಕುಲಪತಿಯಾದ ನಾನು ಅತಿದಕ್ಷನಾದ ದಾಕ್ಷಿಣಾತ್ಯ."

ಇಲ್ಲೊಂದು ಸ್ವಾರಸ್ಯವುಂಟು. ಅಂಬಿಕಾದತ್ತರು ಯಾರೋ ಒಬ್ಬ ಬಂಗಾಳಿ (ಕಶ್ಚಿತ್ ಗೌಡಃ) ಆದರೆ, ಗಣಪತಿಶಾಸ್ತ್ರಿಗಳು ಅತಿದಕ್ಷರಾದ ದಾಕ್ಷಿಣಾತ್ಯರು !

ವಾಸಿಷ್ಠರ ಚಾತುರ್ಯ ಇಷ್ಟಕ್ಕೇ ನಿಲ್ಲಲಿಲ್ಲ ; 'ಭವಾನ್ ಅಂಬಿಕಾದತ್ತಃ', ಅಹಮಂಬಾಯಾಃ ಚಿರಸಪುತ್ರಃ' (ನೀವು ಅಂಬಿಕೆಗೆ ದತ್ತುಮಗ ಅಂಬಿಕಾದತ್ತ;

ನಾನಾದರೋ ಸ್ವಾಮಿ ಗಣಪತಿ !) ಎಂದೂ ಚಮತ್ಕರಿಸಿದರು !! ಹೀಗೆ ಆರಂಭವಾದ ಕವಿತಾಸ್ಪರ್ಧೆಯು ಕ್ಲಿಷ್ಟಸಮಸ್ಯಾಪೂರಣ, ದ್ರಾಘಿಷ್ಠಪದ್ಯಪಾಯ ಪಾಠಗಳಿಂದ ಮುಂದಾಗಿ, ಗಣಪತಿಶಾಸ್ತ್ರಿಗಳಿಗೆ ಕಡೆಗೆ "ಕಾವ್ಯಕಂಠ" ಎಂಬ ಅನ್ವರ್ಥವಾದ ಬಿರುದನ್ನೂ, ಮಹಾವಿದ್ವಾಂಸರ ಗೌರವವನ್ನೂ ಕೊಡಿಸುವುದರಲ್ಲಿ ಪರ್ಯವಸಿಸಿತು.

—೮೦—

ಸುಧಾಧಿಕ್ಯಂ ಸ್ಪೃಹೇಚ್ಛ್ವಶ್ರೂಃ ಫಲಾಧಿಕ್ಯಂ ಸ್ಪೃಹೇದ್ದ್ವಿಪಃ ।
ಪತ್ರಾಧಿಕ್ಯಂ ಸ್ಪೃಹೇಜ್ಜಾಯಾ ಮಾತಾ ತು ತ್ರಿತಯಂ ಸ್ಪೃಹೇತ್ ॥

1904ರಲ್ಲಿ ಕಾವ್ಯಕಂಠಗಣಪತಿಮುನಿಗಳು ಮದ್ರಾಸಿನ ಹಲವೆಡೆಗಳಲ್ಲಿ ಅಷ್ಟಾವಧಾನಗಳನ್ನು ನಿರ್ವಹಿಸಿದಾಗ ಅವರ ಅಸಾಧಾರಣ ಕವಿತಾಧಾರೆ, ಧಾರಣಶಕ್ತಿಗಳಿಗೆ ಮನಸೋತು ವಿಸ್ಮಯಾವಿಷ್ಟರಾಗಿ ಆಧುನಿಕ ವಿದ್ಯಾಭ್ಯಾಸ ಮಾಡುವ ಹಲವರು ತರುಣರು ಅವರನ್ನು ಕಾಣಲು ಬಂದರು. ಎಲ್ಲರೂ ಊಟವಾದ ಬಳಿಕ ತಾಂಬೂಲಚರ್ವಣ ಮಾಡುವಾಗ ಶಾಸ್ತ್ರಿಗಳು ಸುಮ್ಮನಿದ್ದುದನ್ನೂ, ಎಲೆ–ಅಡಕೆಗೆ ಕೈಹಾಕದೆ ಇದ್ದುದನ್ನೂ ಕಂಡು ಇದಕ್ಕೆ ಕಾರಣವೇನೆಂದು ಆ ತರುಣರು ಕೇಳಿದರು. ಶಾಸ್ತ್ರಿಗಳು ತಮಗೆ 'ತಾಂಬೂಲವ್ಯಸನ' ಇಲ್ಲವೆಂದರು. ಆಗ ಆ ತರುಣರು ಅವರನ್ನು ತಾಂಬೂಲಪ್ರಶಸ್ತಿಯಾಗಿ ಶ್ಲೋಕವೊಂದನ್ನು ರಚಿಸಲು ಕೇಳಿದಾಗ ಆಶುವಾಗಿ ಹೊರಬಂದದ್ದೇ ಮೇಲಣ ಕವಿತೆ.

ಶಾಸ್ತ್ರಿಗಳು ಆಯುರ್ವೇದ ರಹಸ್ಯವನ್ನು ಗರ್ಭೀಕರಿಸಿ, ಲೋಕಜ್ಞತೆಯನ್ನೂ ತೋರಿಸಿ ಹೇಳಿದರು—"ಸುಣ್ಣದ ಹೆಚ್ಚಳವನ್ನು ಅತ್ತೆ ಬಯಸುತ್ತಾಳೆ (ಬಾಯಿ ಸುಡಲೆಂದು ; ಅಂದರೆ ಪ್ರಕೃತ ತಾಂಬೂಲ ಮೆಲ್ಲುವವನ ಅತ್ತೆಯು ಈತನು ಬಾಧೆಪಡಲೆಂದು), ಅಡಕೆಯ ಹೆಚ್ಚಳವನ್ನು ವೈದ್ಯ

ಬಯಸುತ್ತಾನೆ (ಅಡಕೆ ಹೆಚ್ಚು ತಿಂದರೆ ರೋಗ ಬರುವುದೆಂದೂ ತನ್ಮೂಲಕ ತನಗೆ ಲಾಭವೆಂದು), ಎಲೆಯ ಹೆಚ್ಚಳವನ್ನು ಪತ್ನಿ ಬಯಸುತ್ತಾಳೆ (ತನ್ನ ಪತಿಗೆ ಇದರಿಂದ ವೀರ್ಯಶಕ್ತಿ ಹೆಚ್ಚುವುದೆಂದು), ತಾಯಿಯಾದರೋ ಚೂರ್ಣವನ್ನೂ ಬಯಸುತ್ತಾಳೆ (ಈ ಚೂರ್ಣದಿಂದ ತಾಂಬೂಲದಲ್ಲಿ ಜೀರ್ಣಕಾರಿಶಕ್ತಿ ಹುಟ್ಟಿ ತನ್ಮೂಲಕ ತನ್ನ ಮಗನ ಆರೋಗ್ಯ ಚೆನ್ನಾಗಿರುವುದೆಂದು).

ಹೀಗೆ ಕಾವ್ಯಕಂಠರು ತಮಗೆ ಇಷ್ಟವಿಲ್ಲದ ವಸ್ತುವಿನ ಮೇಲೂ ಅರ್ಥ ಗೌರವವುಳ್ಳ ಕವಿತೆ ಹೇಳಿದರು !

—೮೧—

ಕುಲೀನಃ ಕ್ಷುದ್ರಾಯ ಪ್ರವರ ಇತಿಧತ್ತೇ ನಿಜಸುತಾಂ
ಅನಾರ್ಯಾನ್ ಪಿಷ್ಟಾಕ್ಷ ಪ್ರಭವ ಇತಿಗಾಯಂತಿ ಶತಶಃ ।
ಬಲಂ ಬಾಹ್ವೋರ್ಲುಪ್ತಂ ಹೃತಮಪಿ ಚ ವಾಗ್ವೀರ್ಯಮರಿಭಿಃ
ದಶಾಂ ದೇಶಸ್ಯೈತಾಂ ಪ್ರತಿಪದಮಯಂ ಧ್ಯಾಯತಿ ಜನಃ ॥

ರಮಣಮಹರ್ಷಿಗಳಿಗೂ, ಅರವಿಂದರಿಗೂ ಅತ್ಯಂತ ಸನ್ನಿಹಿತರಾಗಿ ವೇದರಹಸ್ಯವನ್ನು ಹೊರಗೆಡವಲು ಮಹಾತಪಸ್ಸು ಮಾಡಿದ ಮಹಿಮಾನ್ವಿತರಾಗಿ ಖ್ಯಾತಿವೆತ್ತ ಕಾವ್ಯಕಂಠಗಣಪತಿ ಶಾಸ್ತ್ರಿಗಳು ತುಂಬ ವಿಚಾರವಾದಿಗಳು, ಉದಾರಹೃದಯರು. ಅಸ್ಪೃಶ್ಯಭಾವನೆ, ಜಾತಿಪದ್ಧತಿ ಮೊದಲಾದ ವಿಚಾರಗಳಲ್ಲಿ ಯಥಾರ್ಥವನ್ನು ತಿಳಿಸಿ ಜನರನ್ನು ತಿದ್ದಲು ಮುಂದಾದವರು. ಮಹಾನ್ ದೇಶಭಕ್ತರೂ ಆಗಿದ್ದ ಶಾಸ್ತ್ರಿಗಳಿಗೆ ಭಾರತದ ದಾಸ್ಯವೃತ್ತಿ ದುಃಖ ತಂದಿತ್ತು. ಹೀಗಿರಲು ಒಮ್ಮೆ ಹಲವರು ಶಿಷ್ಯಮಿತ್ರರೊಡನೆ ಮದರಾಸಿನ ಬೀಚಿನಲ್ಲಿ ವಿಹರಿಸುತ್ತಿರಲು ತುಂಬ ಹೊತ್ತಿನಿಂದಲೂ ಇವರು ಮೌನವಾಗಿರುವುದನ್ನು ಗಮನಿಸಿ ಒಬ್ಬರು ಅವರು ಮೌನದಿಂದ ಧ್ಯಾನಿಸುತ್ತಾ ಇರುವುದು ಏನನ್ನು ಎಂದು ಕೇಳಿದಾಗ ಶಾಸ್ತ್ರಿಗಳು ಆಶುವಾಗಿ ಈ ಶಿಖರಿಣೀಪದ್ಯವನ್ನು ನುಡಿದರು.

"ಸರ್ವೇಶದಾತನು ನೀಚನನ್ನು ಅತ್ಯುತ್ತಮನೆಂದು ಭಾವಿಸಿ ತನ್ನ ಮಗಳಿಗೆ ವರನನ್ನಾಗಿ ಆರಿಸುತ್ತಿದ್ದಾನೆ. ವಿವೇಕಿಗಳು ಅನಾರ್ಯ(ಪರಕೀಯ, ಅಸಂಸ್ಕೃತ)ರನ್ನು ಪ್ರಭುಗಳೆಂದು ಹಾಡಿ ನೂರಾರು ಬಗೆಯಲ್ಲಿ ಹೊಗಳುತ್ತಿದ್ದಾರೆ. ತೋಳಿನ ಬಲವನ್ನು ಕಳೆದುಕೊಂಡಮೇಲೆ ವೈರಿಗಳು ವಾಕ್ಶಕ್ತಿಯನ್ನೂ ಕಿತ್ತುಕೊಂಡಿದ್ದಾರೆ [ಸಂಸ್ಕೃತವು ಆಂಗ್ಲೇಯರಿಂದ ವಿಕೃತ ಭಾಷ್ಯಕ್ಕೆ ಒಳಗಾಗಿದೆ. ಹಾಗೂ ವಾಕ್‌ಸ್ವಾತಂತ್ರ್ಯ (ಪತ್ರಿಕಾದಿಗ್ರಂಥನಾದಿಗಳ ಮೂಲಕ) ನಶಿಸಿದೆ.] ಈ ದೇಶದ ಇಂಥ ಸ್ಥಿತಿಯನ್ನು ಹೆಜ್ಜೆಹೆಜ್ಜೆಗೂ ನಾನು ಧ್ಯಾನಿಸುತ್ತಿದ್ದೇನೆ (ಚಿಂತಿಸುತ್ತಿದ್ದೇನೆ).

ಶಾಸ್ತ್ರಿಗಳ ಕಳಕಳಿಯು ನಳನಳಿಸುವ ಪದ್ಯವಾಗಿ ಬಂದಿರುವುದಿಲ್ಲಿ ಗಮನಾರ್ಹ.

_೮೩_

ಜಗತೀಧರಜಾಮಾತಾ ಭವತಾಂ ಭವ್ಯಾಯ ಭೂಯಸೇ ಭವತು ।
ಕಂಚಿದಕಿಂಚನಮಪಿ ಯದ್ವೀಕ್ಷಾ ವಿದಧಾತಿ ಶಕ್ರಸಮಂ ॥

ಕಾವ್ಯಕಂಠ ವಾಸಿಷ್ಠ ಗಣಪತಿ ಮುನಿಗಳು ಘಂಟಾಶತಕಗಳನ್ನು (ಒಂದು ಗಂಟೆಗೆ ನೂರುಪದ್ಯ) ಹೇಳಬಲ್ಲ ಆಶುಕವಿತಾಸರಸ್ವತಿಗಳು. ಅಲ್ಲದೆ ಅವರ ಶಾಸ್ತ್ರಪಾಂಡಿತ್ಯವೂ ಅಪಾರ. ಮದ್ರಾಸಿನಲ್ಲೊಮ್ಮೆ ಅವಧಾನ ಮಾಡುವಾಗ ಆರುನಿಮಿಷಕ್ಕೆ ಇಪ್ಪತ್ತೈದು ಸಂಸ್ಕೃತಪದ್ಯಗಳನ್ನು ಹೇಳಿದ್ದರು! ಪುಸ್ತಕವನ್ನು ತೆರೆದು ಪುಟಗಳು ಕಾಣುವಂತೆ ಮೇಲೆ ಎಸೆಯುತ್ತಲೇ ಇಡಿಯಾಗಿ ಅಲ್ಲಿಯ ವಾಕ್ಯಗಳನ್ನು ಓದಿ ಮತ್ತೆ ಒಪ್ಪಿಸುವಷ್ಟು ಧಾರಣಾಶಕ್ತಿ ಅವರಿಗಿದ್ದಿತು! ವ್ಯಸ್ತಾಕ್ಷರಿಯಂಥ ಕಠಿನ ವಿಭಾಗಗಳನ್ನೂ ಅವಧಾನಗಳಲ್ಲಿ ಸಲೀಲವಾಗಿ ನಿರ್ವಹಿಸುತ್ತಿದ್ದರು.

ಇಂಥ ವಿದ್ವತ್ಕವಿಯನ್ನೊಮ್ಮೆ ತಂಜಾವೂರು ಸುಬ್ರಹ್ಮಣ್ಯಶಾಸ್ತ್ರಿಗಳೆಂಬ ಪಂಡಿತರು ನಾಲ್ಕು ಅರ್ಥ ಬರುವಂತೆ ಒಂದು ಆರ್ಯೆಯನ್ನು ಹೇಳಬೇಕು, ಅದು ಶಿವ-ಶಕ್ತಿ-ಸ್ಕಂದ-ಗಣೇಶರಿಗೆ ಅನ್ವಯವಾಗಬೇಕೆಂದು ಕೇಳಿದಾಗ ಕೂಡಲೇ ಕಾವ್ಯಕಂಠರು ಹೇಳಿದ್ದು ಮೇಲಿನ ಕವಿತೆಯನ್ನು !

"ಜಗತೀಧರಜಾಮಾತೃವು ನಿಮಗೆಲ್ಲ ಬಹುಶುಭವನ್ನು ಮಾಡಲಿ. ಆ ದೇವತೆಯ ಕಡೆಗಣ್ಣೋಟವೂ ಸಹ ಬಡವನನ್ನೂ ಇಂದ್ರನಂತೆ ಮಾಡುತ್ತದೆ."

ಇಲ್ಲಿ 'ಜಗತೀಧರಜಾಮಾತಾ' ಎಂಬಲ್ಲಿ ಅರ್ಥಭೇದಗಳುಂಟು. ಜಗತೀಧರ ಎಂದರೆ ಪರ್ವತ. ಇದರಲ್ಲಿ ಹುಟ್ಟಿದ ಮಾತೆಯೇ ಜಗತೀಧರಜಾ ಮಾತಾ : ಅಂದರೆ ಪಾರ್ವತಿ. 'ಜಗತೀಧರ ಜಾಮಾತೃ' (= ಅಳಿಯ) ಬೆಟ್ಟದ ಅಳಿಯ ಶಿವ. "ಜಗತೀಧರಜಾ ಮಾತ" ಎಂದರೆ ಬೆಟ್ಟದ ಮಗಳನ್ನು ಯಾರು ತಾಯಿಯನ್ನಾಗಿ ಹೊಂದಿದ್ದಾರೋ ಅವರು ಅರ್ಥಾತ್ ಸ್ಕಂದ ಅಥವಾ ಗಣಪತಿ.

ಹೀಗೆ ಚತುರರ್ಥಿಯನ್ನು ಅವಲೀಲೆಯಾಗಿ ಸಾಧಿಸಿದ್ದರು !

— ೮೩ —

ಪ್ರೀತಿಂ ದದಾತಿ ವಿಪುಲಾಂ ಶ್ರಿಯಮಾತನೋತಿ  
ನಿರ್ಮಾತಿ ನೂತ್ನಸಮಯಂ ದುರಿತಂ ಧುನೋತಿ ।  
ಆದ್ರೀಕರೋತಿ ಹೃದಯಾನ್ಯಪಿ ದೇವತಾನಾಂ  
ಕಸ್ಯೈ ಶುಭಾಯ ನ ಭವೇತ್ಕವಿತಾ ವಿದೋಷಾ ॥

1907ರ ವೇಳೆಗೆ ಅತ್ಯಂತ ಬೌದ್ಧಿಕಕ್ಲೇಶವನ್ನು ಕೊಡುವ ಅವಧಾನ ನಿರ್ವಹಣವನ್ನು ಕಾವ್ಯಕಂಠಗಣಪತಿಶಾಸ್ತ್ರಿಗಳು ಬಿಟ್ಟುಬಿಟ್ಟಿದ್ದರು. ವೇದ-ಯೋಗ-ವೇದಾಂತಗಳ ಉನ್ನತ ಸಾಧನೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದ

ಗಣಪತಿಮುನಿಗಳನ್ನೊಮ್ಮೆ ಅವರ ಶಿಷ್ಯರು ವಿನೋದಕ್ಕಾಗಿ ಅವರು ಹಿಂದೆ ನಿರ್ವಹಿಸುತ್ತಿದ್ದ ಅವಧಾನದ ಯಾವುದಾದರೂ ಒಂದು ವಿಶೇಷವನ್ನು ತೋರಿಸಲು ಕೇಳಿದರು. ಅದಕ್ಕೆ ಸಮ್ಮತಿಸಿ ಕಾವ್ಯಕಂಠರು ಆದೇ ತಾನೆ ಅಲ್ಲಿಗೆ ಬಂದ ಆಂಧ್ರರ ವಿದ್ವಾಂಸರೊಬ್ಬರನ್ನು ಪ್ರಶ್ನಿಸಲು ಕೇಳಿ, ಅವರು ಕೊಟ್ಟ ವಿಷಯಕ್ಕೆ—'ವಸಂತತಿಲಕವೃತ್ತದಲ್ಲಿ ಕವಿತೆಯನ್ನು ಕುರಿತು' ಉದ್ದಿಷ್ಟಾಕ್ಷರೀಪದ್ಯವಾಗಿ ಮೇಲ್ಕಂಡ ರಚನೆ ಮಾಡಿದರು. ಅಂತೆಯೇ ಕವಿತೆಯು "ಪ್ರೀತಿಯನ್ನೂ, ಸಿರಿ-ಸಂಪದವನ್ನೂ ಕೊಡುವುದಲ್ಲದೆ ಕೆಡುಕನ್ನು ಕಳೆಯುತ್ತದೆ. ಹೃದಯವೈಶಾಲ್ಯವನ್ನೂ ಆತ್ಮೀಯತೆಯನ್ನೂ ದೇವತೆಗಳಲ್ಲಿ ಸಹ ಮೂಡಿಸುತ್ತದೆ. ದೋಷರಹಿತ ಕಾವ್ಯ ಯಾರಿಗೆ ತಾನೆ ಒಳಿತಾಗದು ? ಎಲ್ಲಕ್ಕೂ ಮಿಗಿಲಾಗಿ ಕವಿತೆ ಹೊಸ ಸಂಪ್ರದಾಯಕ್ಕೆ ಹರಿಕಾರನಲ್ಲವೆ !!" ಅಸಾಧಾರಣ ಆಶುಧಾರೆಯಿಂದ ಹೇಳಿದ ಈ ಪದ್ಯದಲ್ಲಿ ಶಾಸ್ತ್ರಿಗಳು 'ಪ್ರತ್ನಸಮಯ' ಎಂಬ ನಿರೂಪಣಕ್ಕಾಗಿ ಮಾತ್ರ ಸ್ವಲ್ಪ ಸಾವಕಾಶವಾಗಿ ಚಿಂತಿಸಿದರಂತೆ !

---

ಟಿಪ್ಪಣಿ : ಉದ್ದಿಷ್ಟಾಕ್ಷರೀ [illegible] 56 [illegible]

_೮೪_

ಹೃದಯಕುಹರಮಧ್ಯೇ ಕೇವಲಂ ಬ್ರಹ್ಮಮಾತ್ರಂ
ಹ್ಯಹಮಹಮಿತಿ ಸಾಕ್ಷಾದಾತ್ಮರೂಪೇಣ ಭಾತಿ ।
ಹೃದಿ ವಿಶ ಮನಸಾ ಸ್ವಂ ಚಿನ್ವತಾ ಮಜ್ಜತಾ ವಾ
ಪವನಚಲನರೋಧಾದಾತ್ಮನಿಷ್ಠೋ ಭವ ತ್ವಂ ॥

ಈ ಶತಮಾನಾರಂಭದ ಐದು ದಶಕಗಳ ಕಾಲ ಅರುಣಾಚಲದಲ್ಲಿ ಮೌನವ್ಯಾಖ್ಯಾನದಿಂದ ಪರಬ್ರಹ್ಮತತ್ತ್ವವನ್ನು ಮುಮುಕ್ಷುಗಳಿಗೆ ಅಪರೋಕ್ಷ ಮಾರ್ಗದಲ್ಲಿ ನೀಡುತ್ತಿದ್ದ ಭಗವಾನ್ ರಮಣಮಹರ್ಷಿಗಳ ಪುಣ್ಯನಾಮವನ್ನು ತಿಳಿಯದ ಆತ್ಮಜಿಜ್ಞಾಸುಗಳಾದರೂ ಉಂಟೇ ? ಕಾವ್ಯಕಂಠ ವಾಸಿಷ್ಠ ಗಣಪತಿಗಳಂಥ ಮೇಧಾವಿಗಳಿಗೂ ಆರಾಧ್ಯರಾಗಿದ್ದ ಮಹರ್ಷಿಗಳ ಸನ್ನಿಧಿಯಲ್ಲಿ ತಮ್ಮ ಇಂದ್ರಿಯಪ್ರಶ್ನರಾಶಿಗಳಿಗೆ ಅತೀಂದ್ರಿಯಪ್ರತ್ಯುತ್ತರವನ್ನು ಪಡೆದು ಧನ್ಯರಾಗುತ್ತಿದ್ದ ಅನೇಕರಲ್ಲಿ, ಮಹರ್ಷಿಗಳ ಸನ್ನಿಹಿತ ಭಕ್ತರಲ್ಲಿ ಒಬ್ಬರು ಶ್ರೀಜಗದೀಶ್ವರ ಶಾಸ್ತ್ರಿಗಳು.

ಜಗದೀಶ್ವರ ಶಾಸ್ತ್ರಿಗಳೊಮ್ಮೆ ಮೇಲಣ ಮಾಲಿನೀವೃತ್ತದ ಮೊದಲ ಪಾದವನ್ನು ರಚಿಸಿ ಆ ಬಳಿಕ ಪೂರೈಸಲಾಗದೆ ಭಗವಾನರ ಸನ್ನಿಧಿಯಲ್ಲಿಯೇ ಅದನ್ನು ಬಿಟ್ಟು ಹೊರಟುಹೋದರಂತೆ. ಅವರು ಮತ್ತೆ ಬರುವಷ್ಟರಲ್ಲಿಯೇ ಭಗವಾನರು ಉಳಿದ ಚರಣಗಳನ್ನು ಪೂರೈಸಿ 'ಜಗದೀಶ' ಎಂದು ಸಹಿಯನ್ನೂ ಹಾಕಿದ್ದರಂತೆ ! ಶಾಸ್ತ್ರಿಗಳು ಬಂದು ಪೂರ್ಣವಾದ ಪದ್ಯವನ್ನು ನೋಡಿ ಬೆರಗಾಗಿ ಇದನ್ನು ಬರೆದವರಾರೆಂದಾಗ ಶ್ರೀರಮಣರು ನಗುತ್ತಾ 'ಜಗದೀಶ'ನೇ ಅಲ್ಲವೇ ಎಂದರಂತೆ !! ಶಾಸ್ತ್ರಿಗಳಿಗೆ ಜಗದೀಶಾರ್ಥ ಸ್ಫುರಿಸಿತ್ತು.

"ಹೃದಯ ಗುಹೆಯಲ್ಲಿ ಕೇವಲ ಪರಬ್ರಹ್ಮಮಾತ್ರವಾದುದು 'ನಾನು-ನಾನು' ಎಂದು ಆತ್ಮರೂಪದಿಂದ ಸಾಕ್ಷಾತ್ತಾಗಿ ಬೆಳಗುತ್ತದೆ. ಇದರಲ್ಲಿ ನೀನು

ಹುಡುಕುತ್ತಲೋ (ಜ್ಞಾನಮಾರ್ಗ), ಮುಳುಗುತ್ತಲೋ (ಭಕ್ತಿಮಾರ್ಗ) ಪ್ರಾಣಾಯಾಮಾದಿಗಳಿಂದಲೋ (ಯೋಗ-ಕರ್ಮಮಾರ್ಗ) ಆತ್ಮನಿಷ್ಠನಾಗಿ ತನ್ಮಯನೆನಿಸು" ಎಂಬರ್ಥದ ಈ 'ಏಕಶ್ಲೋಕಿ'ಯು ಪೂರ್ವಾರ್ಧದ ಉಪದೇಶವಾಕ್ಯ ಮತ್ತು ಉತ್ತರಾರ್ಧದ ಸಾಧನವಾಕ್ಯಗಳಿಂದ ಅಖಂಡಾನುಭವ ವಾಕ್ಯವೆನಿಸಿ 'ಶ್ರೀರಮಣಗೀತೆ'ಯ ದ್ವಿತೀಯಾಧ್ಯಾಯದಲ್ಲಿ ಸೇರಿ ಸರ್ವದಾ ಶ್ರೀರಮಣರ "ಹೃದಯವಿದ್ಯೆ" ಎಂಬ ಉಪನಿಷದ್ವಿದ್ಯೆಗೆ ನೆಲೆಯಾಗಿದೆ.

—೮೫—

ಅಲಂಕಾರಶಯ್ಯಾನಿಮಿತ್ತೇನ ಶೇಷಃ
ಪುರಾರೇರ್ಮುರಾರೇಶ್ಚ ಗಾತ್ರಾನುಷಂಗಾತ್ ।
ತ್ಯಜನ್ ಸರ್ಪತಾಂ ಭೀಕರೀಂ ಸಜ್ಜನಾನಾಂ
ಮನುಷ್ಯತ್ವಮಾನಂದದಂ ಸಂಪ್ರಪೇದೇ ॥

ಮಹಾವಾಗ್ಗೇಯಕಾರರಾಗಿ ಅಭಿನವತ್ಯಾಗರಾಜರೆಂದು ಖ್ಯಾತರಾದ ಮೈಸೂರು ವಾಸುದೇವಾಚಾರ್ಯರು ಸಾಹಿತ್ಯದಲ್ಲಿಯೂ ನಿಷ್ಣಾತರು. ಅವರು ಎಳೆವೆಯಲ್ಲಿ ತಾತನ ಇಚ್ಛೆಯೂ ಸಂಗೀತಕ್ಕೆ ಮನಸೋತ ತರುಣದಲ್ಲಿ ಮೈಸೂರಿನ ಮಹಾವೈಣಿಕ ಶೇಷಣ್ಣನವರೊಡನೆ ಕೊಯಮುತ್ತೂರಿಗೆ ಹೋಗುವ ಅವಕಾಶ ದೊರೆಯಿತು. ಅಲ್ಲಿ ಚೆಟ್ಟಿಯಾರರೊಬ್ಬರ ಮನೆಯ ಉತ್ಸವದಲ್ಲಿ ಶೇಷಣ್ಣನವರ ಅಮೋಘವಾದನ ಸಾಗಿತು. ಬಳಿಕ ವಿನೋದಕ್ಕಾಗಿ ಶೇಷಣ್ಣನವರು ಆಚಾರ್ಯರನ್ನು ಹಾಡಲು ಪ್ರಸರಾಯಿಸಿ ಅಲ್ಲಿದ್ದವರಿಗೆ ಇವರನ್ನು ಕಿರಿಯ ಹಾಡುಗಾರರೆಂದು ಪರಿಚಯಿಸಿದರು. ತಂತ್ರವನ್ನರಿಯದ ಚಿಕ್ಕವಯಸ್ಸಿನ ಆಚಾರ್ಯರು ಹುಮ್ಮಸ್ಸಿನಿಂದ ಹಾಡಿದಾಗ ಅವರ ಅಂದಿನ ಅಪ್ರಬುದ್ಧಗಾಯನ ಎಲ್ಲರಿಗೂ ನಗೆ ತರಿಸಿತು. ಆಗ ಸತ್ವ ತಿಳಿದು ಕುಪಿತರಾದ ಆಚಾರ್ಯರು ಕೂಡಲೇ ಸಂಸ್ಕೃತದಲ್ಲಿ ಕೆಲವು ಆಶುಕವಿತೆಗಳನ್ನು ಹಾಡಿದರು. ಅದರಲ್ಲಿ ಮೇಲಿನದೂ ಒಂದು. "ಶೇಷನು ಹರಿಗೆ ಹಾಸಿಗೆಯಾಗಿ, ಹರನಿ

ಹಾರವಾಗಿ, ತನ್ನ ಕ್ರೌರ್ಯವನ್ನು-ಈ ಸತ್ಕಾರ್ಯಗಳಿಂದಾಗಿ–ಕಳೆದುಕೊಂಡು ಮಾನವೀಯಗುಣಗಳಿಂದ ಸೌಖ್ಯ ಪಡೆದ" ಇಲ್ಲಿ ಶೇಷನಿಗೂ ಶೇಷಣ್ಣನವರಿಗೂ ಶ್ಲೇಷದ ಸಾಮ್ಯಕಲ್ಪಿಸಿ ಅವರ ಠಕ್ಕನ್ನು ಈ ರೀತಿ ಆಚಾರ್ಯರು ಕವಿತೆಯ ಮೂಲಕ ಚುಚ್ಚಿದ್ದರು ; ಅಲ್ಲದೆ ತಾವು ವಾಸುದೇವನ ಹೆಸರಿನವರು !! ಆಗ ಎಲ್ಲರೂ ಇವರ ಸಂಸ್ಕೃತಪಾಂಡಿತ್ಯಕ್ಕೆ ಮೆಚ್ಚಿ ಸತ್ಕರಿಸಿದರು.

ಬಳಿಕ ಆಚಾರ್ಯರು ಶೇಷಣ್ಣನವರೊಡನೆ ಪಂದ್ಯಕಟ್ಟಿ ಕೊಯಮತ್ತೂರಿನಿಂದ ಮೈಸೂರಿಗೆ ರೈಲಿನಲ್ಲಿ (ಅದೂ ಬೇರೆ ಬೇರೆ ಬೋಗಿಗಳಲ್ಲಿ!) ಬರುವಾಗಲೇ ಮಧ್ಯೇ ಮಧ್ಯೇ ನಿಲ್ದಾಣಗಳಲ್ಲಿ ಶೇಷಣ್ಣನವರಿಂದ ಕಬ್ಬಿಣದ ಕಡಲೆಯಾದ ಅಟ್ಟತಾಳ–ಭೈರವಿರಾಗದ 'ವಿರಿಬೋಣಿ' ವರ್ಣವನ್ನು ಕಲಿತು, ಕರಗತಮಾಡಿಕೊಂಡು (ಏಕಸಂಧಿಗ್ರಾಹಿತ್ವವಿಧಾನದಿಂದ) ಒಪ್ಪಿಸಿ ತಮ್ಮ ಸಂಗೀತವೂ ಕೀಳಾದುದಲ್ಲವೆಂದು ನಿರೂಪಿಸಿದರಂತೆ! ಮುಂದೆ ಇವರ ಸ್ನೇಹ-ಪ್ರೀತಿಗಳು ಸೊಗಸಾಗಿ ಸಾಗಿದವು.

—೮೬—

ಮಹಾಕವಿವೃಷಶ್ರೀಮನ್ ! ಗಮನಂ ಕುತ್ರ ತೇಽಧುನಾ ?
ಕವಿಲೋಕಕುಟುಂಬಸ್ಯ ಕಾಮಧೇನೋ ! ತ್ವದಂತಿಕೇ ॥

ಶ್ರೀಮದಜ್ಞಾತ ಆದಿಭಟ್ಲ ನಾರಾಯಣದಾಸರು ಆಂಧ್ರದ ಅದ್ವಿತೀಯ ಪ್ರತಿಭಾಶಾಲಿ. ಈ ಶತಾಬ್ದದ ಆದಿಯಲ್ಲಿದ್ದ ಇವರು ಸ್ವಯಮಾಚಾರ್ಯ ಪದ್ಧತಿಯಿಂದ ಸಕಲವಿದ್ಯೆಗಳನ್ನೂ ಕಲಿತ ಜಗದದ್ಭುತ. ಸಂಗೀತ-ಸಾಹಿತ್ಯ ನೃತ್ಯಗಳಲ್ಲಿ, ಗಾಯನ-ವಾದನಗಳಲ್ಲಿ, ಬಹುಭಾಷಾಪರಿಣತಿಯಲ್ಲಿ, ಅಮೇಯ ವ್ಯಾಕರಣ ಪಾರೀಣತೆಯಲ್ಲಿ ಇವರಿಗೆ ಇವರೇ ಸಾಟಿ. ಆಶುಕವಿತೆ, ಅಷ್ಟಾವಧಾನಗಳು ಇವರಿಗೆ ಅವಲೀಲೆಯ ಹುಡಿಗೆಲಸ. ಹರಿಕಥಾವಿದ್ಯೆಗೆ ಪಿತಾಮಹ

ಪ್ರಾಯರು. ಧಾರಣಾಶಕ್ತಿಯಲ್ಲಿ ಅಸಾಧಾರಣರು, ಧೋರಣೆಯ ಮಾತಿನಲ್ಲೂ, ವಿಡಂಬನಾಡಂಬರದಲ್ಲೂ ಅಪಾರಣವಿಕ್ರಮ ಇವರದು. ಮೈಸೂರಿನ ಒಡೆಯರು ಇವರ ಸಂಗೀತಸಾಧನೆಗೆ ವಿಸ್ಮಿತರಾಗಿ ಅಭಿನವತ್ಯಾಗರಾಜರೆಂದು ಕೊಂಡಾಡಿದರೆ 'ಪಾಪ ಆ ತ್ಯಾಗಯ್ಯನು ನನಗೆ ಸಮಾನನೇ ? ನಾನು ಭೂಲೋಕ ಗಂಧರ್ವ' ಎಂದು ಕೆಚ್ಚಿನ ಉತ್ತರ ನೀಡಿದವರಿವರು.

ಆಂಧ್ರದ ವಿದ್ವನ್ನೃಪಾಲರಲ್ಲಿ ಅಗ್ರೇಸರನಾದ ಪೀಠಾಪುರದ ರಾಜ ಆನಂದಗಜಪತಿ ಘನವೈಯಾಕರಣ. ಒಮ್ಮೆ ನಾರಾಯಣದಾಸರು ಎದುರಾದಾಗ ಅವರ ಭುವನಮೋಹಕ ಪುರುಷಾಕೃತಿಯನ್ನೂ, ಪಾಂಡಿತೀವೀರವನ್ನೂ ಗಮನಿಸಿ ಕಿಂಚಿತ್ ವಿನೋದದಿಂದ ಆನಂದಗಜಪತಿ ಹೀಗೆ ಸಂಬೋಧಿಸಿದ.

"ಮಹಾಕವಿವೃಷಭ ! ತಮ್ಮ ಪಯಣ ಎತ್ತ ಕಡೆ ?"

(ವೃಷಭ ಎಂಬಲ್ಲಿ) ಗೌರವವಾಚಕದಂತೆಯೇ ಹೋರಿಯಂತೆ ತೊಂಡು, ಅಗಡು ಎಂಬ ಸೂಚಿತವಿದೆ !)

ಕೂಡಲೇ ಇವರು ಉತ್ತರಿಸಿದರು.

"ಕವಿಲೋಕಕುಟುಂಬದ ಕಾಮಧೇನುವೇ ! ನಿಮ್ಮ ಬಳಿಗೇ !" (ಇಲ್ಲಿ ಕಾಮಧೇನು ಶಬ್ದದಿಂದ ಪ್ರಶಂಸೆಯಂತೆಯೇ—ನೀನೂ ನನ್ನಂತೆಯೇ ದನ- ಎಂಬ ಮರುಟಿಪಿಕ ಹಾಗೂ ಹಸುವನ್ನು ಸಮೀಕರಿಸುವ ಗೂಳಿಯ ಪ್ರೌಢ-ಠಂಠಾ ಮತ್ತು ಆನಂದಗಜಪತಿಯ ಸ್ತ್ರೈಣ ; ಇವೆಲ್ಲವೂ ಧ್ವನಿತವಾಗಿರುವುದು ರಸಿಕವೇದ್ಯ) ಅಂತೂ ಪರಕವಿಯನ್ನು ಕೆಣಕಿ ದೊರೆಕವಿ ಕಮಂಗಿಯಾದನು !

— ೮೭ —

ಅತ್ತುಮಂಬ ತವ ಪಾಕಮದ್ಭುತಂ ವಾಂಛತಿ ಸ್ಮ ಕರಪಂಚಕಂ ಮಮ ।
ಅಶ್ಮ-ಕೇಶ-ತೃಣಶೋಧನಾಯ ಯತ್ತಾದನಾರ್ಥಮುದರಾಸ್ಯಯೋರಪಿ ॥

ಈ ಶತಾಬ್ದದ ಆದಿಯಲ್ಲಿಯೇ ಮೈಸೂರು ಪ್ರಾಂತದಲ್ಲಿ ಆಗಿಹೋದ ವಿಲಕ್ಷಣ ಸಂಸ್ಕೃತವಿದ್ವಾಂಸರಲ್ಲಿ ಅತಿ ವಿಚಿತ್ರಸ್ವಭಾವದವರು ದ್ವ್ಯಂಗುಳ ಶ್ರೀನಿವಾಸಾಚಾರ್ಯರು. ಕೈಗಳೆರಡೂ ಊನವಾಗಿ ಎರಡು ಬೆರಳುಗಳು ಮಾತ್ರವೇ ಉಳಿದುಕೊಂಡಿದ್ದರಿಂದ ಇವರು ದ್ವ್ಯಂಗುಳಿಗಳಾದರು. ವಿದ್ವ ಶಾಸ್ತ್ರಪಾಂಡಿತ್ಯಕ್ಕೆ ಸರಿಗಟ್ಟುವ ಅನರ್ಗಳ ಕವಿತಾಶಕ್ತಿ, ಇವೆರಡನ್ನೂ ಮೀರಿಸುವ ಸ್ತ್ರೀಚಾಪಲ್ಯ, ಚಾರಿತ್ರ್ಯಸ್ಖಲನ ಇವರದಾಗಿತ್ತೆಂದು ಪ್ರತೀತಿ. ವಿಕಟಕವಿತೆಯೂ, ನರ್ಮಹಾಸ್ಯವೂ ತುಂಬಿದ್ದ ಇವರ ವಾಕ್ಕು ಸರ್ವತ್ರ ನಿಶಿತ. ಒಮ್ಮೆ ಗುರುಗಳು ಪಾಠಮಾಡುವಾಗ ಅಂದು ಬಾರದಿದ್ದ ಯಾರೋ ...ಶಾಸ್ತ್ರಿ ಎಂಬ ವಿದ್ಯಾರ್ಥಿ ಎಲ್ಲೆಂದು ಕೇಳಿದಾಗ ಒಡನೆಯೇ ಇವರು 'ಶಾಸ್ತ್ರೀ ವರಸ್ತ್ರೀಂ ಗತಃ' ಎಂದಿದ್ದರಂತೆ! ಇಂಥ ಪಂಡಿತರು ವಿದ್ಯಾರ್ಥಿಯಾಗಿದ್ದಾಗ ಅಡುಗೂಲಜ್ಜಿಯ ಮನೆಯೊಂದರಲ್ಲಿ ಅಶನಕ್ಕಾಗಿ ಹೋಗಿ ಬರುತ್ತಿದ್ದರು. ಇವರಂತೆಯೇ ಮತ್ತೂ ಹಲವರು ವಿದ್ಯಾರ್ಥಿಗಳಲ್ಲಿಗೆ ಬರುತ್ತಿದ್ದರು. ಈಕೆಗೆ ಮಹಾರಾಜರಿಂದ ವಿದ್ಯಾರ್ಥಿಗಳ ಹಿತಕ್ಕಾಗಿ ಸ್ವಲ್ಪ ಹಣ-ಭತ್ಯ ಸಂದಾಯವಾಗುತ್ತಿತ್ತು. ಹೀಗಿದ್ದೂ ಆಕೆಯ ಅಡುಗೆ ಯಮ ಪಾಕವೇ! ಇಂಥ ಕದನ್ನದ ಮೇಲೆ ದ್ವ್ಯಂಗುಳ ಶ್ರೀನಿವಾಸಾಚಾರ್ಯರು ಕಟ್ಟಿದ ಅಣಕು ಪದ್ಯವೇ ಮೇಲಿನ ಕವಿತೆ.

-ತಾಯಿ! ನಿನ್ನ ಅದ್ಭುತವಾದ ಅಡುಗೆಯನ್ನುಣ್ಣಲು ನನಗೆ ಐದು ಕೈಗಳು ಬೇಕೆನಿಸುತ್ತದೆ. ಕಲ್ಲು, ಕೂದಲು, ಹುಲ್ಲನ್ನು ಆರಿಸಲೂ, ಬಾಯಿ, ಹೊಟ್ಟೆಗಳನ್ನು ಬಡಿದುಕೊಳ್ಳಲೂ ಇಷ್ಟು ಸಾಲದೇ ?"

ಈ ಶ್ಲೋಕದಿಂದ ಮಹಾರಾಜರಿಗೂ ಯಥಾರ್ಥ ತಿಳಿದು ಕೊನೆಗೂ ಊಟದಲ್ಲಿ ಸುಧಾರಣೆಯಾಯಿತಂತೆ! ಅಂತೂ ಕವಿತೆಯಿಂದ ಕೊರತೆ ತೀರಿತು!

—೮೮—

ನಿರ್ಮೋಕೋ ಯದಿ ಶಾರದೇಂದುಮಹಸಾಮಾಯಾಮ್ಯ ಸಂಗೃಹ್ಯತೇ
ದಿವ್ಯೈಸ್ತೈನ ಕುವಿಂದತಂತುಕುಶಲೈರ್ಯದ್ಯಾಲಿಕಾ ಕಲ್ಪ್ಯತೇ ।
ಆಸೇಕೋ ಹಿಮವಾಲುಕಾಂಬುಪೃಷತಸ್ತತ್ರಾಸಕೃತ್ತನ್ಯತೇ
ಶಕ್ಯಂ ಕೇರಳಸುಭ್ರುವಾಂ ಸ್ತನತಟಂ ಕರ್ತುಂ ನಿಚೋಲಾಂಚಿತಂ ॥

ಆಸೂರಿ ಅನಂದಾಳ್ವಾರರು ಈ ಶತಾಬ್ದದ ಆದಿಯಲ್ಲಿದ್ದ ಮಹಾ ವಿದ್ವಾಂಸರು ಬಹುಶಾಸ್ತ್ರನಿಷ್ಣಾತರಾದ ಪ್ರೌಢಕವಿಗಳು. ಮೇಲುಕೋಟೆಯ ಈ ಮಹನೀಯರು ಉತ್ತರೋತ್ತರ ಶ್ರೀಯದುಗಿರಿ ಯತಿರಾಜಮಠದ ಸ್ವಾಮಿಗಳಾದರು. ಪೂರ್ವಾಶ್ರಮದಲ್ಲಿದ್ದಾಗ ಇವರೊಮ್ಮೆ ಶೃಂಗೇರಿಯ ಶ್ರೀ ಶಿವಾಭಿನವ ನೃಸಿಂಹಭಾರತೀಸ್ವಾಮಿಗಳ ಅಪೇಕ್ಷೆಯಂತೆ ಕಾಲಟಿಗೆ ಹೋಗಿ ಅಲ್ಲಿಯ ಶ್ರೀಶಂಕರದೇವಾಲಯಾದಿ ಕಾರ್ಯಕ್ರಮಗಳಲ್ಲಿ ಪಾಲ್ಗೊಂಡರು. ಆಗ ಅಲ್ಲಿಂದ ಮಿತ್ರರೊಬ್ಬರಿಗೆ ಬರೆದ ಪತ್ರದಲ್ಲಿ ಮೇಲಣ ಪದ್ಯವನ್ನು ರಚಿಸಿದ್ದರು. ಕೇರಳದ ಸ್ತ್ರೀಯರು ಆ ಕಾಲದಲ್ಲಿ ಕುಪ್ಪಸ ತೊಡದೆ ಕೇವಲ ತುಂಡು-ಮುಂಡುಗಳಲ್ಲಿರುತ್ತಿದ್ದುದನ್ನು ಪರಾಮರ್ಶಿಸಿದ ಈ ಪದ್ಯದ ತಾತ್ಪರ್ಯವಿಂತಿದೆ.

"ಶರಚ್ಚಂದ್ರನ ಕಾಂತಿಯ ಪೊರೆಯನ್ನು ಕಷ್ಟಪಟ್ಟು ತೆಗೆದು ಅದರಿಂದ ಬಲೆಯಂಥ ಬಟ್ಟೆಯನ್ನು ದೇವಲೋಕದ ತಂತುವಾಯರ ಕೈಯಲ್ಲಿ ನೇಯಿಸಿ, ಅದನ್ನು ಪಚ್ಚಕರ್ಪೂರದ ನೀರಿನಲ್ಲಿ ನೆನೆಯಿಸಿ ವಸ್ತ್ರವನ್ನಾಗಿಸಿಕೊಟ್ಟರೆ ಆಗ ಮಾತ್ರ ಕೇರಳದ ಸುಂದರಿಯರು ಕುಪ್ಪಸವನ್ನು ತೊಡಲು ಸಾಧ್ಯವಾದೀತು"

ಈ ಪದ್ಯವು ಆಸೂರಿಯವರಿಗೂ ಪರಿಚಿತರಾಗಿದ್ದ ಡಿ.ವಿ.ಜಿ.ಯವರ ಕಣ್ಣಿಗೆ ಬಿದ್ದಾಗ ಅವರು ಕಡೆಯ ಚರಣದ 'ನಿಚೋಲಾಂಚಿತಂ' ಎಂಬ 'ನಿಚೋಲ + ಅಂಚಿತಂ' ಎನ್ನುವ ಎರಡು ಶಬ್ದಗಳಿಗೆ ಬದಲಾಗಿ 'ನ+ಚೋಲ+ಅಂಚಿತಂ' ಎಂದು ಮೂರು ಶಬ್ದಗಳನ್ನು ಇರಿಸಬಹುದೆಂದು ವೈನೋದಿಕ ವ್ಯಾಖ್ಯಾನವನ್ನು ಮಾಡಿದರು. ಈ ಬದಲಾವಣೆಯಿಂದಾಗಿ

ಪದ್ಯದ ತಾತ್ಪರ್ಯವು—ಇಷ್ಟೆಲ್ಲ ಶ್ರಮದಿಂದ ಬಟ್ಟೆಯನ್ನು ರೂಪಿಸಿದರೂ ಕೇರಳಕಾಂತೆಯರು ಆಗಲೂ ಕುಪ್ಪಸ ತೊಡುವುದಿಲ್ಲ ! ! ಎಂದು ಬವರಾಗುತ್ತದೆ. ಈ ತಿದ್ದಾವಣೆಯನ್ನು ಕಂಡ ಹಿರಿಯರು ತರುಣ ಡಿ.ವಿ.ಜಿ.ಯವರನ್ನು ಲಘುವಾಗಿ ಚುಡಾಯಿಸಿದರಂತೆ !

—೮೯—

ನ ವೇದಾಂತೇ ಗಾಢಾ ನ ಚ ಪರಿಚಿತಂ ಶಬ್ದಶಾಸ್ತ್ರಂ
ನ ವಾ ತರ್ಕೇ ವೇದೇ ನ ಚ ಸರಸತಾ ಕಾವ್ಯನಿವಹೇ ।
ವಯಂ ಶ್ರೀಮದ್ವ್ಯಾಕೀಹುಳಿಪಳದ್ಯಕೋಸುಂಬ್ರಿ ತೊವ್ವೀ
ಹಯಗ್ರೀವಾಂಬೋಡೀಕರಿಗಡುಬುದಧ್ಯನ್ನರಸಿಕಾಃ ॥

('ಕರಿಗಡುಬು ಚಿತ್ರಾನ್ನ ಚತುರಾಃ' ಎಂಬ ಪಾಠಾಂತರವೂ ಉಂಟೆಂದು ತಿಳಿದಿದೆ !)

ಮಹಾಕವಿ-ರಸಋಷಿ ಡಿ.ವಿ.ಜಿಯವರು ಹೊಸಗನ್ನಡದ ಹರಿಕಾರರು ಮಾತ್ರವಲ್ಲ, ನವಭಾರತದ ವಿಭೂತಿಪುರುಷರಲ್ಲೊಬ್ಬರು. ತತ್ತ್ವ-ಜೀವನ-ವಿದ್ಯೆ-ವಿಮರ್ಶನ–ಪಾಂಡಿತ್ಯ-ಪ್ರತಿಭಾನ - ಲೋಕಸಂಗ್ರಹ - ಅಪರಿಗ್ರಹ-ರಾಷ್ಟ್ರಪ್ರಜ್ಞೆ–ರಸಜಾಗೃತಿ ಇವೆಲ್ಲದರಲ್ಲೂ ಮಹನೀಯರಾಗಿದ್ದ ಅವರು ನಿಜವಾದ ಅರ್ಥದಲ್ಲಿ ಪೂರ್ಣಪುರುಷ, ಧೀಮಂತ. ಅವರ ಚಿರಕೃತಿಗಳು ಕನ್ನಡಕ್ಕೇ, ಭಾಷಾಸರಸ್ವತಿಗೇ ಭೂಷಣಗಳು.

ವಸ್ತುತಃ ಪ್ರಗಲ್ಭವಾದ ಪ್ರತಿಭಾಂತರ್ದೃಷ್ಟಿಯುಳ್ಳ ಪಂಡಿತರಾದರೂ ಡಿ.ವಿ.ಜಿ.ಯವರಿಗೆ ತಮ್ಮ ವ್ಯಾಸಂಗ ಗಟ್ಟಿಯಾದುದಲ್ಲವೆಂದು ವಿನಯಾನುಸಂಧಾನ. ಒಮ್ಮೆ ಸುಪ್ರಸಿದ್ಧವಿದ್ವಾಂಸ ಶ್ರೀ ಎನ್. ರಂಗನಾಥಶರ್ಮಾ ಅವರೊಡನೆ ಮಾತನಾಡುತ್ತಾ ಕೇಳಿದರು ; 'ಶರ್ಮಾ ! ನಿಮಗೆ ವೈಯಾಕರಣ ಗರಣಿ ಕೃಷ್ಣಾಚಾರ್ಯರು ತಿಳಿದಿದ್ದರೋ ?' ಶರ್ಮರೆಂದರು, 'ಇಲ್ಲ, ಆದರೆ ಅವರ ಪುತ್ರ ತಿಮ್ಮಣ್ಣಾಚಾರ್ಯರು ನನ್ನ ಗುರುಗಳು'. ಡಿ.ವಿ.ಜಿ. ಮರುನುಡಿದರು 'ಶರ್ಮಾ ! ನಾನು ವ್ಯಾಕರಣ ಕಲಿಯಲು ಕೃಷ್ಣಾಚಾರ್ಯರನ್ನು

ಆಶ್ರಯಿಸಿದೆ. ಮಹನೀಯರಾದ ಅವರಿಂದ ನನಗೆ ಶಬ್ದಶಾಸ್ತ್ರದ ಆಚಾರ್ಯತ್ವ ಬರಲಿಲ್ಲ; ಸೂಪಶಾಸ್ತ್ರದ ಆಚಾರ್ಯತ್ವ ಬಂದಿತು. ಅಂಥ ಸಜ್ಜನಮೂರ್ಧರ ಅಡುಗೆಯು ನಾಲಗೆಗೆ ರುಚಿತೇ ಹೊರತು ಅಮರವಾಗಿ ಬರಲಿಲ್ಲ.' ಹೀಗೆಂದು 'ಶಿಥಿಲಶಿಖರಿಣೀ' ವೃತ್ತದ ಮೇಲಿನ ವಿನೋದಪದ್ಯ ಹೇಳಿದರು.

"ನಾವು ವೇದಾಂತದಲ್ಲಿ ನುರಿತವರಲ್ಲ, ವ್ಯಾಕರಣವನ್ನು ಅರಿತವರಲ್ಲ, ತರ್ಕ–ವೇದಗಳಲ್ಲಿ ಪರಿಶ್ರಮವಿಲ್ಲ, ಸಾಹಿತ್ಯದಲ್ಲಿ ಸರಸತೆಯಿಲ್ಲ. ಕೇವಲ ಶ್ರೀಮದ್ವೇಳಿಹುಳಿ, ಪಳದ್ಯ, ಕೋಸಂಬರಿ, ಕೊದ್ದೆ, ಹಯಗ್ರೀವ, ಅಂಬೊಡೆ, ಕರಿಗಡುಬು ಮತ್ತು ಮೊಸರನ್ನಗಳಲ್ಲಿ ರಸಿಕರಾದೆವು"

ಇದು ಕೇವಲ ಡಿ.ವಿ.ಜಿ.ಯವರ ಹಾಸ್ಯವೈದಗ್ಧ್ಯ, ಸಂಸ್ಕೃತ-ಕನ್ನಡಗಳ ಉಭಯ-ಭಾಷೆಯ ಸೊಗಸಿಗೆ ಸಾಕ್ಷಿ ಹೊರತು ಅವರು ತಾವೆಂದುಕೊಂಡ ವಿದ್ಯಾಕಿಂಚನತೆಗಲ್ಲ !

—೯೦—

ಅಪಾದಮೌಲಿಪರ್ಯಂತಂ ರಾಜಸೇವಕಸೇವಿತಃ ।
ಗುಂಡೋ ವಿರಾಜತೇ ಹೃದ್ಯಶ್ರೀನಿವಾಸಕೃಪಾಬಲಾತ್ ॥

ರಾಜತಜ್ಞಯವರೆಂದು ಹೆಸರಾಗಿದ್ದ ರೈಟ್ ಆನರಬಲ್ ಶ್ರೀನಿವಾಸ ಶಾಸ್ತ್ರಿಗಳು 1923ರಲ್ಲಿ ಮೈಸೂರು ಸಂಸ್ಥಾನದ ರಾಜ್ಯಾತಿಥಿಯಾಗಿ ಆಗಮಿ

ಟಿಪ್ಪಣಿ :— [illegible]

[illegible]

ಸಿದರು. ಆಗ ಅವರು ಹಾಕಿದ ನಿಬಂಧನೆಯೇನೆಂದರೆ ಡಿ.ವಿ.ಜಿ.ಯವರು ಸರ್ವದಾ ಅವರೊಡನೆ ಇರಬೇಕೆಂದು ! ಹೀಗಾಗಿ ಡಿ.ವಿ.ಜಿ.ಯವರಿಗೆ ಸರ್ಕಾರದ ಭಾರಿಯ ಆತಿಥ್ಯ–ವಿಹಾರಾಮಗಳು ಇಷ್ಟವಿಲ್ಲದಿದ್ದರೂ, ತಾವು ಮನಸಾ ಗೌರವಿಸಿದ ಶಾಸ್ತ್ರಿಗಳೊಡನೆ ಇರುವ ಗುಡ-ನಿಂಬಮಿಶ್ರಣಾಸ್ವಾದ ಒದಗಿಬಂದಿತು.

ಕೆಲದಿನಗಳ ಬಳಿಕ ಆತಿಥ್ಯದ ಬಂಗಾರದ ಪಂಜರದಿಂದ ಹೊರಬಂದು ಹೋಟಲಿನ ದೋಸೆ ತಿನ್ನಲು ಡಿ.ವಿ.ಜಿ. ಸಂಚು ಹೂಡಿ, ಎದುರು ಸಿಕ್ಕ ಮನೆ-ವಾರ್ತೆಯವರಿಗೆ ಕ್ಷೌರದ ನೆಪ ಹೇಳಿದರು. ಅರಸರ ಅತಿಥಿಗೆ ಹಜಾಮರನ್ನು ಹುಡುಕಿಕೊಂಡು ಹೋಗುವ ಹದನೇ ? ಇದ್ದಲ್ಲಿಗೇ ನಾಯಿಂದನು ಬಂದ ! ಮತ್ತೊಮ್ಮೆ ಎಕ್ಕಡ ಹೊಲೆಯಿಸುವ ನೆಪದಿಂದ ಹೊರಬಿದ್ದರು. ಅರಮನೆಯ ಮೇಲ್ವಿಚಾರಕರು ತಾವೇ ಎಕ್ಕಡವನ್ನು ಕಿತ್ತುಕೊಂಡು ಸ್ವಯಂ ಹೋಗಿ ಹೊಲೆಯಿಸಿಕೊಂಡುಬಂದು ಅತಿಥಿ ಸೇವೆ ಮಾಡಿ ಅರಮನೆಯ ಅಂತಸ್ತನ್ನುಳಿಸಿದರು.; ಡಿ.ವಿ.ಜಿ.ಯವರ ಬಯಕೆಯನ್ನು ಬರಡಾಗಿಸಿದರು ! ಆಗ ಡಿ.ವಿ.ಜಿ.ಯವರು ಮೇಲಣ ವಿನೋದ ಶ್ಲೋಕವನ್ನು ನುಡಿದರು.

"ಅಪಾದಮಸ್ತಕವೂ ರಾಜಸೇವಕರಿಂದ ಗುಂಡನಿಗೆ ಸೇವೆಯಾಗುತ್ತಿದೆ. ಇದು ಅವನಿಗೆ ರಾಜಯೋಗ—ಆದರೆ ಇದೆಲ್ಲವೂ ಶ್ರೀನಿವಾಸನ ಕರುಣೆ"

ಈ ಶ್ಲೋಕ ಅದು ಹೇಗೋ ವಾಜಪೇಯಂ ವೆಂಕಟಸುಬ್ಬಯ್ಯನವರ ಕೈಗೆ ಹೋಗಿ ಅಲ್ಲಿಂದ ಎಸ್. ಜಿ. ಶಾಸ್ತ್ರಿಗಳಿಗೆ ದೊರೆತು ಆ ಬಳಿಕ ವಾಗ್ಗೇಯಕಾರ ವಾಸುದೇವಾಚಾರ್ಯರಿಗೆ ಸಿಕ್ಕಿ ಅವರು ವಿ. ಎಸ್. ಶ್ರೀನಿವಾಸಶಾಸ್ತ್ರಿಗಳೇ ಮೊದಲಾದ ಅಧ್ವರ ಎದುರು ಘನಸಂಗೀತವನ್ನು ನಿವೇದಿಸುವಾಗ ಈ ವಿನೋದದ ಕವಿತೆಯನ್ನು ಕಲ್ಯಾಣಿರಾಗದಲ್ಲಿ ಸಾಧನೆಯವಾಗಿ ಹಾಡಿದರಂತೆ ! (ಕ್ಷೌರದ ಕೆಲಸ, ಚಪ್ಪಲಿಹೊಲಿಗೆ ಮೊದಲಾದುವುಗಳನ್ನು ಧ್ವನಿಯಿಸಿ. ಕ್ಷೌರವು 'ಭದ್ರಾಕರಣ'ವಾದರೂ ಮಂಗಳಕರ ಕಲ್ಯಾಣಿರಾಗವೆಂದು ವಿವರಿಸಿ ಬಲು ಗೇಲಿಯಾಗುವಂತೆ ಹಾಡಿದ್ದು !!)

ಈ ಸಂದರ್ಭವನ್ನು ಗಮನಿಸಿದಾಗ ಆ ಕಾಲದ ಹಿರಿಯರ ಕಮನೀಯ ಸಭ್ಯವಿನೋದದ ಸ್ವಾರಸ್ಯ ಸೊಗಸಾಗಿ ಮನಸ್ಸಿಗೆ ಮುಟ್ಟುತ್ತವೆ.

—೯೧—

ನಿರ್ಜನಾಟವೀಮಧ್ಯದುಸ್ಥಿತೌ ಛಿನ್ನಭಿತ್ತಿಕೇ ಕಂಟಕಾಂಚಿತೇ ।
ಶೂನ್ಯದೇವತಾಮಂದಿರೇಽಭವಚ್ಚಂದ್ರಶೇಖರೋಽಪ್ಯರ್ಕಶೇಖರಃ ॥

ಇಂಚಿಗಷ್ಟೇ ಶತಮಾನೋತ್ಸವವಾದ ಶ್ರೀರಾಳ್ಳಪಲ್ಲಿ ಅನಂತಕೃಷ್ಣಶರ್ಮರ ಜೀವನ ಭಾರತೀಯಭಾವನೆಯ ಸಾರನಿದರ್ಶನ. ಕರ್ಣಾಟಕಾಂಧ್ರ ಸವ್ಯಸಾಚಿಯೆಂದು ಹೆಸರಾಗಿದ್ದ ರಾಳ್ಳಪಲ್ಲಿಯವರು ಸಂಸ್ಕೃತ-ಕನ್ನಡ-ತೆಲುಗು-ಪ್ರಾಕೃತಗಳಲ್ಲಿ ಪ್ರಕೃಷ್ಟಪಂಡಿತರು. ತಮಿಳು-ಇಂಗ್ಲೀಷುಗಳಲ್ಲಿಯೂ ನುರಿತವರು. ಸಾಹಿತ್ಯ-ಸಂಗೀತಗಳ ನಿಧಿ. ಸಮನ್ವಯ ಸಾರ್ವಭೌಮರು.

ಬಾಲ್ಯದಲ್ಲಿಯೇ ಪರಕಾಲಮಠದ ಶ್ರೀಗಳಾದ ಶ್ರೀ ಶ್ರೀ ಕೃಷ್ಣಬ್ರಹ್ಮತಂತ್ರಯತೀಂದ್ರರಂಥ ಸರ್ವಶಾಸ್ತ್ರಪಾರಂಗತರ ಮೆಚ್ಚುಗೆಗೆ ಪಾತ್ರರಾದ ಏಕಸಂಧಿಗ್ರಾಹಿಯೂ, ಮಧುರಕವಿಯೂ ಆದ ರಾಳ್ಳಪಲ್ಲಿಯವರು ಒಮ್ಮೆ ಮೈಸೂರಿಗೆ ಆಗಮಿಸಿದ ಆಂಧ್ರದ ದೊಡ್ಡ ಅವಧಾನಿಗಳಾದ ಶ್ರೀ ಓಸುಪಾಟಿ ಚಿದಂಬರಶಾಸ್ತ್ರಿಗಳ ಅಷ್ಟಾವಧಾನಕ್ಕೆ ಸಮಸ್ಯಾಪೃಚ್ಛಕರಾಗಿ ನಿಯೋಜಿತರಾದರು. ಆಗ ಇವರು ಕೊಟ್ಟ ಸಮಸ್ಯೆ 'ಚಂದ್ರಶೇಖರೋಽಪ್ಯರ್ಕಶೇಖರಃ'

ಶಾಸ್ತ್ರಿಗಳು ಈ ಸಮಸ್ಯೆಗೆ ಕಥಂಚಿತ್ ಪರಿಹಾರವನ್ನು ಹೇಳಿದರೂ ಸಹೃದಯರಿಗೆ ಸೊಗಯಿಸಲಿಲ್ಲ. ಆಗ ರಾಳ್ಳಪಲ್ಲಿಯವರು ಮೇಲಿನ ಪದ್ಯವನ್ನು ನುಡಿದರು.

"ನಿರ್ಜನವಾದ ಕಾಡಿನಲ್ಲಿ ಗೋಡೆ ಬಿರುಬಿದ್ದು, ಮುಳ್ಳು-ಕಳ್ಳಿ ತುಂಬಿದ ಅನಾರಾಧಿತ ದೇವಾಲಯದಲ್ಲಿ ಈಶ್ವರಲಿಂಗವು (ಚಂದ್ರಶೇಖರನು) ಅರ್ಕಶೇಖರ

ಎನಿಸಬೇಕಲ್ಲವೇ ! (ಇಲ್ಲಿ ಅರ್ಕ ಎಂದರೆ ಸೂರ್ಯ ಎಂದೂ, ಎಕ್ಕ ಎಂದೂ ಶ್ಲೇಷೆ. ಸೂರಿಲ್ಲದ ದೇಗುಲದಲ್ಲಿ ಶಿವ ಅರ್ಕಮೇಖರ. ಅಥವಾ ಎಕ್ಕ ಹುಟ್ಟಿ ಹೋದ ಹಾಳು ಗುಡಿಯಲ್ಲಿ ಎಕ್ಕದ ಹೂ ಲಿಂಗದ ಮೇಲುಮರಿದಾಗಲೂ ಅರ್ಕಶೇಖರ !) ಇಂಥ ಹೃದ್ಯಕಲ್ಪನೆಯನ್ನು ಅನುಭವಿಸಿ ರಸಿಕರು ಆನಂದಿಸದಿದ್ದಾರೆಯೇ ?

—೯೨—

ಲೋಕಾಪವಾದಭೀತಂ ಚ ಜಾನಕೀಶೋಕಕಾರಕಂ ।
ನ ಸ್ಮರೇದ್ವಾಲಿಹಂತಾರಂ ರಾಘವಂ ಧರ್ಮಬಾಹಿರಂ ॥

ಡಾ॥ ಎ.ಎನ್. ಮೂರ್ತಿರಾಯರು ಕನ್ನಡದ ಧೀಮಂತರಲ್ಲೊಬ್ಬರು. ವೈಚಾರಿಕ ಪ್ರಖರತೆಯಲ್ಲಿ ದಾಕ್ಷಿಣ್ಯವನ್ನು ಬಾಡಿಸದ, ಸಹೃದಯತೆಯ ಪೂರದಲ್ಲಿ ಸಾಕ್ಷಿಭಾವವನ್ನು ಮುಳುಗಿಸದ ಸಾಮರಸ್ಯ ಇವರದು. ಇಂಗ್ಲೀಷ್‌ಪ್ರಾಧ್ಯಾಪಕರಾಗಿ ಕನ್ನಡದಲ್ಲಿ ಲಲಿತಪ್ರಬಂಧ, ಅನುವಾದ, ರಸವೈಚಾರಿಕ ರಚನೆಗಳೇ ಮೊದಲಾದುವುಗಳನ್ನು ಮಾಡಿದ ಮೂರ್ತಿರಾಯರು ಸಂಸ್ಕೃತವನ್ನು ಕ್ರಮವಾಗಿ ಕಲಿತವರಲ್ಲವಾದರೂ ಅದರ ಹೃದಯವನ್ನು ಬಲ್ಲವರು. ತೀನಂಶ್ರೀ, ಪುತಿನ, ಡಿ.ಎಲ್.ಎನ್., ನಂ. ಶಿವರಾಮಶಾಸ್ತ್ರಿಗಳೇ ಮೊದಲಾದ ವಿದ್ವನ್ಮಿತ್ರರೊಡಗೂಡಿ ವಾಲ್ಮೀಕಿಮುನಿಗಳ ಶ್ರೀಮದ್ರಾಮಾಯಣವನ್ನು ಓದುವ ಮೂಲಕ ಶ್ಲೋಕದ ತಾನವನ್ನು ಮನಸ್ಸಿಗೆ ತಂದುಕೊಂಡಿದ್ದರು.

ಮೂರ್ತಿರಾಯರಿಗೆ ವಾಲ್ಮೀಕಿರಾಮಾಯಣವನ್ನೋದಿದಾಗ, ಸ್ನೇಹಿತರೊಡನೆ ಚರ್ಚಿಸಿದಾಗ ಸೀತೆಯ ವಿಚಾರದಲ್ಲಿ ರಾಮ ಅನ್ಯಾಯವಾಗಿ ನಡೆದುಕೊಂಡನೆಂದೆನ್ನಿಸಿತು (ಅವರ 'ಪೂರ್ವಸೂರಿಗಳೊಡನೆ' ಎಂಬ ಗ್ರಂಥ ನೋಡಿ) ಆಗ ಕರುಣೆ ಕನಲಿದ ಫಲವಾಗಿ ಮೇಲಣ ಶ್ಲೋಕ ಮೊಳೆತಿತು !

"ಲೋಕಜನರ ನಿಂದೆ–ಅಪವಾದಗಳಿಗೆ ಹೆದರಿ ಸೀತೆಯನ್ನು ಕಾಡಿಗೆ ಅಟ್ಟುವುದರ ಮೂಲಕ ಆಕೆಯ ದುಃಖಕ್ಕೆ ಕಾರಣನಾದ ವಾಲಿಯ ಹಂತಕನೂ, ಧರ್ಮಬಾಹಿರನೂ ಆದ ರಾಘವನನ್ನು ಸ್ಮರಿಸಬಾರದು !!"

ವಾಲ್ಮೀಕಿಯ 'ಮಾನಿಷಾದ...' ಶ್ಲೋಕವು ಹೇಗೆ 'ಶೋಕಃ ಶ್ಲೋಕತ್ವಮಾಗತಃ' ಎಂದಾಯಿತೋ ರಾಯರ ಈ ಶ್ಲೋಕವು ಹಾಗೆಯೇ ಸೀತಾಸಹಾನುಭೂತಿಯಿಂದ ಬಂದದ್ದು. ಆದರೆ ಪತಿಧರ್ಮವೆಂಬ ವ್ಯಷ್ಟಿಧರ್ಮಕ್ಕಿಂತ ರಾಜಧರ್ಮವೆಂಬ ಸಮಷ್ಟಿಧರ್ಮವನ್ನು ಶ್ರೀರಾಮನು ಹೆಚ್ಚು ಮನ್ನಿಸಿದನೆಂದು ನಾವು ನೆನೆಯಬೇಕು. ಮಿಗಿಲಾಗಿ ಸೀತೆಯೇ ಶ್ರೀರಾಮನನ್ನು ರಂಧ್ರಾನ್ವೇಷಣ ದೃಷ್ಟಿಯಿಂದ ನಿಂದಿಸುವವರನ್ನು ಒಪ್ಪಳೆಂದಮೇಲೆ ನಾವು ಆಕೆಯ ಪರ ವಕಾಲತ್ತು ಮಾಡಲಾಗದು. ಅಲ್ಲದೆ ಸೀತಾಸಹಾನುಭೂತಿಗಿಂತಲೂ ರಾಮದ್ವೇಷವೇ ಪ್ರಧಾನವಾಗಿ ವಿಮರ್ಶೆ ಸಾಗಬಾರದು. ಮಿಗಿಲಾಗಿ ಧರ್ಮಸಂಕಟಗಳಲ್ಲಿ ಮಹಾನುಭಾವರುಗಳು ಯಾವ ಸೂಕ್ಷ್ಮ–ನಯಗಳನ್ನನುಸರಿಸಿದರೆಂಬುದನ್ನರಿಯಲೆಂದೇ ರಾಮಾಯಣ–ಮಹಾಭಾರತಗಳ ಇಂಥ ಪ್ರಸಂಗಗಳಿರುವುದು. ಆದುದರಿಂದ ಈ ಶ್ಲೋಕವನ್ನು ಮೂರ್ತಿರಾಯರ ಕಾರುಣ್ಯ-ರಸಾವೇಶಗಳ ಹಿನ್ನೆಲೆಯಲ್ಲಿ ಪರಿಭಾವಿಸಿದಾಗ ಮಾತ್ರ ಸೊಗಸೆನಿಸುತ್ತದೆ.

—೯೧—

ಮನೀಷಿವಿಶ್ರುತಂ ಶಾಸ್ತ್ರಪಾರಗಂ ಛಾತ್ರವತ್ಸಲಂ ।
ಭವಂತಮಭಿನಂದಾಮಿ ಪದ್ಮಭೂಷಣಭೂಷಿತಂ ॥

ಸುಸಂಸ್ಕೃತಿ, ಪಾಂಡಿತ್ಯ, ರಾಸಿಕ್ಯಗಳಿಗೆ ತ್ರಿವೇಣೀಸಂಗಮದಂತಿದ್ದ ಹೊಸಗನ್ನಡ ಸಾಹಿತ್ಯದ ಸೀಮಾಪುರುಷರಲ್ಲಿ ತೀ.ನಂ. ಶ್ರೀಕಂಠಯ್ಯನವರು ಅಗ್ರತಾಂಬೂಲಾರ್ಹರು. ಬರೆದದ್ದೆಲ್ಲವೂ ಬಂಗಾರವಾದ ವಿರಳರ ಪಂಕ್ತಿಗೆ

ಸೇರಿದ್ದ ಸರಳರು. ಸರಳತೆಗಾಗಿ ಸರಸತೆಯನ್ನು ಬಿಟ್ಟು ಬರಡಾಗದ ಸಹೃದಯರು. ಪಕ್ವಜೀವನದ ಪೂರ್ಣಫಲಸೌರಭ ಇವರ ಕೃತಿಗಳಲ್ಲಿ ಸದಾ ಕಂದಲಿತವಾಗಿದೆ.

ಧಾರವಾಡದಲ್ಲಿ ಕನ್ನಡವಿಭಾಗವನ್ನು ಸ್ಥಾಪಿಸಿದ ತೀ.ನಂ.ಶ್ರೀಯವರು ವಿರಾಮದಿನಗಳಲ್ಲಿ ಸನಿಹದ ಪುಣೆಯಲ್ಲಿ ಭಾಷಾಶಾಸ್ತ್ರ ವ್ಯಾಸಂಗಕ್ಕಾಗಿ ಹೋಗಿ ಬರುತ್ತಿದ್ದರು. ಆಗ ಪರಿಚಿತರಾಗಿ ಗುರುತುಲ್ಯರೆನಿಸಿದವರು ಪ್ರಬುದ್ಧ ಭಾಷಾಶಾಸ್ತ್ರಿ ಡಾ|| ಸುನೀತಿಕುಮಾರಚಟರ್ಜಿ. ಇವರಿಗೆ ಪದ್ಮಭೂಷಣ ಪ್ರಶಸ್ತಿ ಬಂದಾಗ ತೀನಂಶ್ರೀಯವರು ಅಭಿನಂದನೆಯ ತಂತಿಕೊಡಲು ಸಹಜವಾಗಿಯೇ ಮುಂದಾದರಾದರೂ ಯಾವ ಭಾಷೆಯಲ್ಲಿ ಅಭಿನಂದಿಸುವುದೆಂದು ಚಿಂತೆಯಾಯಿತು. ಚಟರ್ಜಿಯವರು ಹತ್ತಾರು ಭಾಷೆಗಳಲ್ಲಿ ಅರಿತುನುರಿತವರು. ಕಡೆಗೆ ಸಂಸ್ಕೃತದಲ್ಲಿ ಸಾಂಪ್ರದಾಯಿಕವಾಗಿ ಮೇಲಿನ ಶ್ಲೋಕವನ್ನು ರಚಿಸಿದರು.

"ಸುನೀತಿಯಿಂದ ಖ್ಯಾತರಾಗಿ, ಶಾಸ್ತ್ರಗಳನ್ನರಿತು, ವಿದ್ಯಾರ್ಥಿವತ್ಸಲರಾದ ತಮ್ಮನ್ನು ಪದ್ಮಭೂಷಣ ಪದವೀಭೂಷಿತರಾದುದಕ್ಕಾಗಿ ಅಭಿನಂದಿಸುತ್ತೇನೆ" ತುಂಬ ನೇರವಾದ ಈ ಸರಳ ಶ್ಲೋಕರಚನೆ ಆಚಾರ್ಯ ಎಂ. ಹಿರಿಯಣ್ಣನವರ ಶಿಷ್ಯರಿಗೆ ಕಷ್ಟವೇನಲ್ಲ. ಆದರೆ ದೈವದ ಕ್ರೂರವಿಡಂಬನೆಯೇನೆಂದರೆ ತೀ.ನಂ.ಶ್ರೀ. ಅವರ ಅಕಾಲಮರಣವನ್ನು ಕೇಳಿ ಡಾ|| ಸುನೀತಿಕುಮಾರಚಟರ್ಜಿಯವರೂ ಸಂಸ್ಕೃತದ ಅನುಷ್ಟುಪ್ ಶ್ಲೋಕಮಯವಾದ ಶೋಕಸಂದೇಶವನ್ನೇ* ಕಳುಹಬೇಕಾಗಿ ಬಂದದ್ದು !

---

* ಈ ಶ್ಲೋಕಗಳನ್ನು ಆಚಾರ್ಯ ತೀ.ನಂ.ಶ್ರೀ. ಅವರ ಸಂಸ್ಮರಣಗ್ರಂಥ "ಶ್ರೀಕಂಠತೀರ್ಥ"ದಲ್ಲಿ ನೋಡಬಹುದು.

—೯೪—

ಅವ್ಯಾದವ್ಯಾಜಕಾರುಣ್ಯಸ್ಫೂರ್ತಿರ್ಮೂರ್ತಿರುಮಾಪತೇಃ ।
ಅಲೌಕಿಕಪ್ರಭಾಸಾಂದ್ರಾ ಲೋಕಂ ದುಃಖಮಯಂ ಸದಾ ॥

ಡಾ॥ ಕೆ. ಎಸ್. ನಾಗರಾಜನ್ ಈಗ್ಗೆ ಕೆಲವರ್ಷಗಳ ಹಿಂದಷ್ಟೇ ತೀರಿಕೊಂಡ ಬೆಂಗಳೂರಿನ ಪ್ರಸಿದ್ಧ ಸಂಸ್ಕೃತಜ್ಞರು. ಬಾಲ್ಯದಿಂದಲೇ ಸಂಸ್ಕೃತದಲ್ಲಿ ಪದ್ಯರಚನೆಯನ್ನು ಆರಂಭಿಸಿದ ನಿಶಿತಮತಿಗಳು. ಸಂಸ್ಕೃತವನ್ನು ಜೀವಿಕೆಯಾಗಿ ಕೈಗೊಳ್ಳದಿದ್ದರೂ ಅದನ್ನು ಜೀವವನ್ನಾಗಿ ಭಾವಿಸಿ ಮಹಾಕಾವ್ಯ, ಖಂಡಕಾವ್ಯ, ಗದ್ಯಕಾವ್ಯ, ನಾಟಕ, ಸ್ತೋತ್ರಾದಿಗಳನೇಕವನ್ನು ರಚಿಸಿದ ಯಶಸ್ಸು ಅವರದು.

ಮೂಲತಃ ಬಿ.ಎಸ್ಸಿ. ಮಾಡಿದ ನಾಗರಾಜನ್ ಸಂಸ್ಕೃತದಲ್ಲಿ ಪಿಎಚ್.ಡಿ ಮಾಡಲು ಪುಣೆಯ ವಿಶ್ವವಿದ್ಯಾಲಯವನ್ನು ಸಂಪರ್ಕಿಸಿದರು. ಆದರೆ ಕನಿಷ್ಠಾರ್ಹತೆಯಾದ ಸಂಸ್ಕೃತ ಎಂ.ಎ. ಪದವಿ ಇವರಿಗಿಲ್ಲವೆಂದು ಕೂಡಲೇ ಅರ್ಜಿ ತಿರಸ್ಕೃತವಾಯಿತು. ಸಂಸ್ಕೃತದಲ್ಲಿ ನಾನಾ ಕೃತಿಗಳನ್ನು ರಚಿಸಿ ಪಾಂಡಿತ್ಯವನ್ನು ಪಡೆದಿದ್ದರೂ 'ಡಿಗ್ರಿ'ಗೇ ಬೆಲೆ ಹೆಚ್ಚಾಗಿತ್ತು !

ಇಂಥ ಸಂದರ್ಭದಲ್ಲಿ ಪುಣೆ ವಿಶ್ವವಿದ್ಯಾಲಯದ ಉಪಕುಲಪತಿ ಡಾ॥ ಜಯಕರ್ ಬೆಂಗಳೂರಿಗೆ ಬಂದರು. ಸ್ವಯಂ ಸಂಸ್ಕೃತಜ್ಞರಾದ ಅವರನ್ನು ಕಂಡು ಕಡೆಯ ಪ್ರಯತ್ನವಾಗಿ ಅಹವಾಲು ಮಾಡಿಕೊಳ್ಳಲು ನಾಗರಾಜನ್ ಎಣಿಸಿದರು. ಪುಟ್ಟಣ್ಣಚೆಟ್ಟಿ ಪುರಭವನದ ಸೋಪಾನಗಳ ಮೇಲೆ ಸರಸರನೆ ಏರಿ ಧಾವಿಸುತ್ತಿದ್ದ ಜಯಕರ್ ಅವರನ್ನು ನಾಗರಾಜನ್ ತಡೆದು ತಮ್ಮ ವಿಚಾರವನ್ನು ನಿವೇದಿಸಿಕೊಂಡರು. ತ್ವರೆಯಲ್ಲಿದ್ದ ಜಯಕರ್ 'ನಿಮ್ಮ ಪಾಂಡಿತ್ಯ ಪರೀಕ್ಷೆಗೆ ನನಗೆ ಹೆಚ್ಚು ವೇಳೆಯಿಲ್ಲ. ಒಂದೇ ಒಂದು ಶ್ಲೋಕವನ್ನು ರಚಿಸಿರಿ ಸಾಕು; ಅದರಿಂದ ನಿಮ್ಮನ್ನು ಅಳೆಯುತ್ತೇನೆ' ಎಂದರು, ಆಗ ನಾಗರಾಜನ್ ಆಶುವಾಗಿ ನುಡಿದದ್ದೇ ಮೇಲಿನ ಶ್ಲೋಕ ; "ಲೋಕಾತೀತ ಕಾಂತಿಕಂದಲಿತವಾದ ಅಹೇತುಕ ಕರುಣಾಸ್ಫೂರ್ತಿಯ ಶಿವನ ಸ್ವರೂಪವು

ದುಃಖಮಯವಾದ ಈ ಲೋಕವನ್ನು ಸದಾ ಕಾಪಾಡಲಿ" ಶ್ರುತಿಸುಭಗವೂ ಅರ್ಥಪುಷ್ಟವೂ ಆದ ಕವಿತೆಗೆ ಮೆಚ್ಚಿದ ಜಯಕರ್ ಕೂಡಲೇ ಅವರಿಗೆ ವಿಶೇಷ ನಿಯಮಗಳನ್ನು ಕಲ್ಪಿಸಿ ಪಿಎಚ್.ಡಿ.ಗೆ ಸಲೀಲವಾಗಿ ಅವಕಾಶ ಕೊಡಿಸಿ ಕಡೆಗೆ ಹೇಳಿದರು "ಇಂಥ ಶ್ಲೋಕಕ್ಕೇ ಪಿಎಚ್.ಡಿ. ಕೊಡಬಹುದು. ಹೀಗಿರುವಾಗ ಅವಕಾಶ ಮಾತ್ರ ಕಲ್ಪಿಸುವುದು ಹಿರಿದಾದ ಮಾತೇ ?"

—೯೫—

ವಿನಯಂ ಸಹನಂ ಕರುಣಾಂ ಸುಮತಿಂ ಲಭತೇ ಸುಗುಣಾನಿತಿ ಸಜ್ಜನತಃ ।
ವಿಪರೀತತಯಾಽವಗುಣಾನ್ ಕ್ರಮಶಃ ಚತುರಶ್ಚತುರೋಽಚತುರಶ್ಚತುರಃ ॥

ಶ್ರೀಯುತ ಲಂಕಾ. ಕೃಷ್ಣಮೂರ್ತಿಯವರು ನಮ್ಮ ಸಮಕಾಲೀನ ವಿದ್ವಾಂಸರಲ್ಲಿ ಒಬ್ಬರು. ಮೂಲತಃ ಕಾನೂನಿನ ಕ್ಷೇತ್ರಕ್ಕೆ ಸಂಬಂಧಿಸಿದವ ರಾದರೂ ಸಾಹಿತ್ಯದಲ್ಲಿ ಕೃತಭೂರಿಪರಿಶ್ರಮರು. ಸಂಸ್ಕೃತ, ಕನ್ನಡ ಮತ್ತು ತೆಲುಗು ಭಾಷೆಗಳಲ್ಲಿ ಸಲಕ್ಷಣವಾದ ಪ್ರಸನ್ನಗಂಭೀರಪದ್ಯನಿರ್ಮಾಣದಲ್ಲಿ ಕೋವಿದರು. ಆಲೋಚನಾಮೃತವಾಗಿ ವಕುಲಪುಷ್ಪಸೌರಭಪ್ರತೀಕಾಶವಾದ ಇವರ ಸಾಹಿತ್ಯ ಮಾರ್ಗಕಾವ್ಯದ ಸಮರ್ಥಪ್ರತಿನಿಧಿ. ವ್ಯಾಕರಣ ಮತ್ತು ಧರ್ಮಶಾಸ್ತ್ರಾದಿಗಳಲ್ಲೂ ವಿಪುಲವೈದುಷ್ಯ ಇವರದು. ಲೋಕಹಿತವನ್ನು ಸಾತ್ತ್ವಿಕ ಪಥದಿಂದ ಸಾಧಿಸುವ ಶ್ರೀಯುತರು ಅವಧಾನಕಲೆಯ ಬೆಳವಣಿಗೆ ಗಾಗಿ ಮಾಡುತ್ತಿರುವ ಸೇವೆ ಬಹುಪ್ರಶಂಸನೀಯ.

ಇವರು ಒಮ್ಮೆ ಅವಧಾನವೊಂದನ್ನು ನೋಡಲು ಹೊಸೂರಿಗೆ ಹೋಗಿದ್ದಾಗ ಅವಧಾನಕ್ಕೆ ಕೆಲನಿಮಿಷಗಳ ಮುನ್ನವಷ್ಟೇ ಇವರನ್ನು ಪೃಚ್ಛಕ ರನ್ನಾಗಿರಲು ಕೇಳಿಕೊಳ್ಳಲಾಯಿತು. ಆಗ ಆಶುವಾಗಿ ರಚಿಸಿದ ಸಮಸ್ಯಾ ಪೂರಣವೇ ಮೇಲಿನ ತೋಟಕವೃತ್ತದ ಪದ್ಯ. "ಚತುರಶ್ಚತುರೋಽ-

ಚತುರಶ್ಚತುರಃ" ಎಂಬ ಈ ಸಮಸ್ಯೆಯನ್ನು ಅವಧಾನಿ ಮಾಡುಗುಲ ನಾಗಫಣಿ ಶರ್ಮರು ತಮ್ಮ ಅವಧಾನವನ್ನು ಕಂಡ ಜನತೆ ತಮ್ಮನ್ನು ಚತುರ-ಚತುರ-ಚತುರ-ಚತುರ ಎಂದು ಸ್ತುತಿಸಿದರೆಂಬಂತೆ ಪರಿಹರಿಸಿದರು. ಆದರೆ ವಸ್ತುತಃ ಸಮಸ್ಯೆಯಲ್ಲಿ ಸಂಧಿ ಬಿಡಿಸಿದರೆ "ಚತುರಃ ಚತುರಃ ಅಚತುರಃ ಚತುರಃ" ಎಂದು ಆಗುತ್ತದೆ ! ಅವಧಾನಿಯು ಅಂತೂ ಒಮ್ಮೆ 'ಅಚತುರ' ರಾಗಿ ಬಿಟ್ಟಿದ್ದರು !! ಕೃಷ್ಣಮೂರ್ತಿಯವರ ಪದ್ಯಾರ್ಥ ಹೀಗೆ ! "ವಿನಯ-ಕರುಣೆ-ಸಹನೆ-ಸುಮತಿಗಳೆಂಬ ನಾಲ್ಕು ಗುಣಗಳನ್ನು ಚತುರನು ಸಜ್ಜನಸೇವೆಯಿಂದ ಪಡೆದರೆ ; ಹೀಗೆ ಸೇವಿಸದ ಅಚತುರನು ಅವಿನಯ ನಿಷ್ಕರುಣೆ, ಅಸಹನೆ, ಕುಮತಿಗಳೆಂಬ ನಾಲ್ಕು ದುರ್ಗುಣಗಳನ್ನು ಹೊಂದುವನು.

ಇಲ್ಲಿ ಚತುರಃ ಎಂಬ ಶಬ್ದಕ್ಕೆ ಜಾಣ ಎಂದು ಮಾತ್ರವಲ್ಲದೆ ಪುಲ್ಲಿಂಗದ ಚತುಃಶಬ್ದದ ದ್ವಿತೀಯಾವಿಭಕ್ತಿಯ ಬಹುವಚನರೂಪವೂ (ನಾಲ್ಕನ್ನು) ಇದೆಯೆಂಬ ಪರಿಜ್ಞಾನದ ಮೇಲೆ ಪರಿಹಾರ ಸಿದ್ಧವಾಗಿದೆ.

—೯೬—

ಉತ್ತುಂಗಭುಜನಾಶೋ ವಾ ದೇಶಕಾಲಗತಿಶ್ಚ ವಾ ।
ವೇಶ್ಯಾವಣಿಗ್ವಿನಾಶೋ ವಾ ನಂದೋ ರಾಜಾ ಭವಿಷ್ಯತಿ ॥

ಉತ್ತುಂಗಭುಜನೆಂಬ ರಾಜನು ಹಿಂದೊಮ್ಮೆ ತನ್ನ ನಚ್ಚಿನವರಾಗಿದ್ದ ಸತೀಸುತರನ್ನು ಮರೆತು ವೇಶ್ಯೆಯೊಬ್ಬಳಲ್ಲಿ ಅನುರಕ್ತನಾಗಿ ರಾಜ್ಯಕಾರ್ಯಗಳನ್ನೂ ಮರೆತ. ಮೂಲೆಗುಂಪಾಗಿದ್ದ ಸತೀ ಸುತರ ಬಳಿ ನಿಷ್ಠಾವತಿಯಾದ ದಾಸಿಯೊಬ್ಬಳು ಮಾತ್ರ ಸೇವೆಗೆ ಇದ್ದಳು. ದಾರಿದ್ರ್ಯದಲ್ಲಿ ರಾಣಿಯೂ ಅವಳ ಪುತ್ರ ನಂದನೂ ತೊಳಲಾಡುತ್ತಿದ್ದಾಗ ಇವರ ಪರಿಚಿತನಾದ ವಣಿಕನೊಬ್ಬ ಅರಮನೆಗೆ ಬಂದ. ರಾಣಿಯ ಸ್ಥಾನದಲ್ಲಿ ವೇಶ್ಯೆಯನ್ನು ಕಂಡು ಅಲ್ಲಿ ವ್ಯಾಪಾರವನ್ನು ಮಾಡಲಿಚ್ಛಿಸದೆ ರಾಣಿ ಇದ್ದ ಗುಡಿಸಲಿಗೇ

ಬಂದುಬಿಟ್ಟ. ತನ್ನ ರಿಕ್ತತೆಯಿಂದಾಗಿ ವಸ್ತುಗಳನ್ನು ಕೊಳ್ಳಲಾರದೆ ತನ್ನಂತರಂಗದ ಅಶಕ್ತಿಯನ್ನು ಆ ವರ್ತಕನಿಗೆ ರಾಣಿ ತಿಳಿಸಿದಳು. ಆದರೂ ಸಜ್ಜನನಾದ ವರ್ತಕನು ನಿಃಶುಲ್ಕವಾಗಿ ಸ್ವೀಕರಿಸಲು ಒತ್ತಾಯಿಸಿ; ರಾಣಿ ಅದಕ್ಕೆ ಸರ್ವಾತ್ಮನಾ ಒಪ್ಪದಿರಲು, ಸಾಲವಾಗಿಯಾದರೂ ಕೊಳ್ಳಲು ಕೇಳಿಕೊಂಡ. ಅದಕ್ಕೂ ರಾಣಿಯು ಸ್ವಾಭಿಮಾನದಿಂದ ಹಿಂಜರಿಯಲು ಬಳಿಯಿದ್ದ ದಾಸಿಯು ಅನುನಯದಿಂದ ರಾಣಿಗೆ ಮೇಲಿನ ಶ್ಲೋಕವನ್ನು ಹೇಳಿದಳು.

"ಉತ್ತುಂಗಭುಜನೇ ಸಾಯಬಹುದು, ದೇಶ-ಕಾಲಗಳ ಸ್ಥಿತಿಯೇ ಬದಲಾಗಬಹುದು, ಆ ವೇಶ್ಯೆಯೋ ಈ ವರ್ತಕನೋ ಸಾಯಬಹುದು, ನಮ್ಮ ನಂದನೇ ರಾಜನಾಗಬಹುದು—ಅಂತೂ ಇದಾವುದೊಂದು ನಡೆದರೂ ಈ ಸಾಲದ ಭಾರ ಉಳಿಯುವುದಿಲ್ಲ"

ರಾಣಿಯು ಪತಿಯ ಹಾಗೂ ವರ್ತಕನ ಸಾವೆಂಬ ಅಮಂಗಳ ಬೇಡವೆಂದು ಹೇಳಿ ಕಡೆಗೂ ಒಪ್ಪಿ ಸಾಲವಾಗಿ ವಸ್ತುಗಳನ್ನು ತೆಗೆದುಕೊಂಡಳು.

ದೈವಾನುಕೂಲತೆಯಿಂದ ಮುಂದೆ ಅಚಿರದಲ್ಲೇ ಜನತೆ ದಂಗೆ ಎದ್ದು ಉತ್ತುಂಗಭುಜನು ತಪ್ಪನ್ನರಿತುಕೊಳ್ಳಲು, ರಾಣಿಗೆ ಹಿಂದಿನ ಸ್ಥಾನ ಲಭಿಸಿತು. ನಂದನೇ ರಾಜನಾದನು. ಆಪತ್ಕಾಲದಲ್ಲಿ ಧೈರ್ಯ ಹೇಳಿದ ದಾಸಿಯನ್ನೂ, ಉದಾರಿವರ್ತಕನನ್ನೂ ನಂದನು ಸಂಮಾನಿಸಿದ.

ಈಗಲೂ ಆಶಾಕಿರಣವನ್ನುಳಿಸಿಕೊಳ್ಳುವ ಮನಃಪ್ರವೃತ್ತಿಯವರು "ನಂದೋ ರಾಜಾ ಭವಿಷ್ಯತಿ" ಎಂದು ನಾಣ್ಣುಡಿಯಾಗಿ ಹೇಳುವುದು ಸರ್ವವಿದಿತ.

—೯೭—

ಗತಾನುಗತಿಕೋ ಲೋಕೋ ನ ಲೋಕಃ ಪಾರಮಾರ್ಥಿಕಃ ।
ವಾಲುಕಾಲಿಂಗಮಾತ್ರೇಣ ಗತಂ ಮೇ ತಾಮ್ರಭಾಜನಂ ॥

ಒಬ್ಬ ಲೋಕಜ್ಞನಾದ ಬ್ರಾಹ್ಮಣ ಕಾಶೀಯಾತ್ರೆಗೆ ತೆರಳಿದ. ವಾರಾಣಸಿಯಲ್ಲಿ ಗಂಗಾಸ್ನಾನಕ್ಕಾಗಿ ನದೀತಟಕ್ಕೆ ಬಂದಾಗ ಆತನಿಗೆ ತನ್ನ ಕೈಯಲ್ಲಿದ್ದ ಬೆಲೆಬಾಳುವ ತಾಮ್ರದ ಕಲಶವು ಸ್ನಾನಕಾಲದಲ್ಲಿ ನಿರುಪಯೋಗಿಯೆನಿಸಿದುದರಿಂದ (ಕೇವಲ ಮುಳುಗು ಹಾಕಲು ಚೊಂಬು ಬೇಡವಷ್ಟೆ!) ಅದನ್ನೊಂದೆಡೆ ಕ್ಷೇಮವಾಗಿ ಕಾದಿರಿಸಲು ನೋಡಿದ. ಎಲ್ಲಿಯೂ ಸಮುಚಿತಸ್ಥಾನವನ್ನು ಕಾಣದೆ ಕಡೆಗೆ ಉಪಾಯವೊಂದನ್ನು ಚಿಂತಿಸಿ ಅಂತೆಯೇ ದಡದಲ್ಲಿ ಮರಳಿನ ನಡುವೆ ಕಲಶವನ್ನು ಹುಗಿದು ಗುರುತಿಗೂ ರಕ್ಷಣೆಗೂ ಸೈಕತಲಿಂಗವೊಂದನ್ನು ಅದರ ಮೇಲೆ ನಿರ್ಮಿಸಿ ನಿಶ್ಚಿಂತನಾಗಿ ನದಿಗೆ ನಡೆದ. ಅವನು ಸ್ನಾನ ಮುಗಿಸಿ ಬರುವಷ್ಟರಲ್ಲಿ ದಡದ ಮೇಲೆ ನೂರಾರು ಸೈಕತಲಿಂಗಗಳು ನಿರ್ಮಿತವಾಗಿದ್ದವು! ಸ್ನಾನಕ್ಕೆ ಬರುತ್ತಿದ್ದ ಪ್ರತಿಯೊಬ್ಬರೂ ಗಂಗಾತಟಿಯಲ್ಲಿ ಮರಳಲಿಂಗವನ್ನು ಮಾಡಿಯೇ ಗಂಗೆಯಲ್ಲಿ ಮುಳುಗಬೇಕೆಂದು ಶಾಸ್ತ್ರವಿಧಿಯೇನೋ ಎಂದು ಭಾವಿಸಿ ಆ ಬ್ರಾಹ್ಮಣನ ಲಿಂಗಕ್ಕೆ ಸದೃಶವಾದ ನೂರಾರು ಲಿಂಗಗಳನ್ನು ನಿರ್ಮಿಸಿಬಿಟ್ಟಿದ್ದರು! ತನ್ನ ಚಾತುರ್ಯವಿಂತು ತನಗೇ ಮುಳುವಾದದ್ದನ್ನು ಕಂಡ ಬ್ರಾಹ್ಮಣ ಕಂಗಾಲಾಗಿದ್ದ! ಈಗ ಗುರುತು ಸಿಗದು; ಯತ್ನಿಸಲೂ ಆಗದು! (ಶಿವಲಿಂಗಗಳನ್ನು ಒಡೆದು ಕಲಶಕ್ಕಾಗಿ ಹುಡುಕಲು ಆಗದರೆ ಮೂಢ ಆಸ್ತಿಕಸಮೂಹ ಸುಮ್ಮನಿದ್ದೀತೇ?) ಆಗ ಅವನು ತನ್ನ ಪಾಡನ್ನು ಮೇಲ್ಕಂಡಂತೆ ಹೇಳಿಕೊಂಡ.

"ಈ ಜಗತ್ತು ಸದಾ ಒಬ್ಬರಹಿಂದೆ ಮತ್ತೊಬ್ಬರೆಂಬಂತೆ-ಗತಾನುಗತಿಕವಾಗಿ ಸಾಗುವುದೇ ಹೊರತು ನಿಜವಾದ ಅಂತರಾರ್ಥವನ್ನರಿತು ಸಾಗದು. ಮರಳಿನ ಲಿಂಗದಿಂದಾಗಿ ನನ್ನ ತಾಮ್ರಕಲಶ ಕೈಜಾರಿತು"

—೯೮—

ಅಸ್ಮಾಕಂ ಬದರೀಚಕ್ರಂ ಯುಷ್ಮಾಕಂ ಬದರೀತರುಃ ।
ಬಾದರಾಯಣಸಂಬಂಧಾದ್ಯೂಯಂ ಯೂಯಂ ವಯಂ ವಯಂ ॥

ಒಮ್ಮೆ ಒಬ್ಬ ಬ್ರಾಹ್ಮಣ ಎತ್ತಿನಬಂಡಿಯಲ್ಲಿ ಪ್ರಯಾಣಿಸುತ್ತಿದ್ದ. ಊಟದ ಹೊತ್ತಿಗೆ ಗ್ರಾಮವೊಂದನ್ನು ಸೇರಿದ. ಅಲ್ಲಿ ಇವನಿಗೆ ಯಾರೂ ಪರಿಚಿತರಲ್ಲ. ಆದರೆ ಹಸಿವೆ ಕೇಳಬೇಕಲ್ಲ! ಹೀಗಾಗಿ ಧೈರ್ಯಮಾಡಿ ಬೋರೆಯ ಹಣ್ಣಿನ ಮರವೊಂದು ಮುಂಭಾಗದಲ್ಲಿರುವ ಮನೆಯನ್ನೊಂದನ್ನು ಕಂಡು ಒಳಗೆ ನುಗ್ಗಿದ. ಆ ಮನೆಯ ಒಡೆಯ ಸಾತ್ತ್ವಿಕ ಬ್ರಾಹ್ಮಣ. ಅನಿರೀಕ್ಷಿತ ಅಪರಿಚಿತನೊಬ್ಬನ ಆಗಮನದಿಂದ ಗಲಿಬಿಲಿಗೊಂಡ. ಇವನಾದರೋ ಆ ಗೃಹಸ್ಥನು ಚಿರಪರಿಚಿತನೆಂಬಂತೆ ಸಲುಗೆ-ಪ್ರೀತಿ-ಗೌರವಗಳಿಂದ ವ್ಯವಹರಿಸ ತೊಡಗಿದ. ಆಗ ಆ ಗೃಹಸ್ಥನು ಶಿಷ್ಟಾಚಾರದಂತೆ ತಾನೂ ಆಗಂತುಕನ ಪರಿಚಯವುಂಟೆಂಬಂತೆ ವರ್ತಿಸಿ ಊಟ-ಉಪಚಾರಗಳ ಆತಿಥ್ಯ ಕೊಟ್ಟ. ಬಂದ ಕೆಲಸವು ಹೀಗೆ ಸಫಲವಾದ ಬಳಿಕ ಯಾತ್ರಿಕ ಬ್ರಾಹ್ಮಣನು ಹೊರಡಲನುವಾದ. ಅವನು ಧನ್ಯವಾದಗಳಿಂದ ವಿದಾಯ ಹೇಳಿ ತೆರಳುತ್ತಿರುವಾಗ ಇದುವರೆಗೂ ಹೇಗೋ ತಡೆದುಕೊಂಡು ನಟಿಸಿ ಸೌಜನ್ಯ ತೋರಿದ್ದ ಗೃಹಸ್ಥನು ಸ್ವಲ್ಪ ಲಜ್ಜಾಸಂಕೋಚಗಳಿಂದಲೇ ಆತನ ಪರಿಚಯ ಕೇಳಿದ ಹಾಗೂ ಅವನಿಗೆ ತಾನು ಹೇಗೆ ಸಂಬಂಧಿತನೆಂಬುದನ್ನೂ ಪ್ರಶ್ನಿಸಿದ. ಆಗ ಬಂಡಿಯನ್ನೇರುತ್ತಾ ಬ್ರಾಹ್ಮಣನು ಮೇಲಿನ ಶ್ಲೋಕವನ್ನು ನುಡಿದ.

"ನಮ್ಮ ಬಂಡಿಯ ಚಕ್ರ ಬೋರೆಮರದ್ದು; ನಿಮ್ಮ ಮನೆಯ ಮುಂದೆಯೂ ಬೋರೆಯ ಮರವಿದೆ. ಹೀಗಾಗಿ ಬಾದರಾಯಣ ಸಂಬಂಧ (ಬೋರೆಯ ಮರಕ್ಕೆ ಸನ್ನಿಹಿತವಾದ)ದಿಂದಾಗಿ ನೀವು ನೀವೇ ನಾವು ನಾವೇ (ಅಥವಾ ನೀವು-ನಾವು ; ನಾವು-ನೀವು ಎಂದೂ ಅರ್ಥೈಸಬಹುದು)" ಇದನ್ನು ಕೇಳಿ ಆ ಸಭ್ಯಗೃಹಸ್ಥ ಅವಾಕ್ಕಾಗುತ್ತಿದ್ದಂತೆಯೇ ಬಂಡಿ ದೂರ ಚಲಿಸಿತು.

ಇಂದೂ ಸಹ ಬಾದರಾಯಣಸಂಬಂಧವೆಂಬ ವ್ಯವಹಾರವು ಅತೀವ ದೂರಬಂಧುತ್ವ, ಕ್ವಚಿತ್ಪರಿಚಿತಿಗಳಿಗೆ ಅನ್ವಯವಾಗುವುದನ್ನು ಗಮನಿಸಬಹುದು.

—೬೬—

ಅಸ್ಯ ಮೂರ್ಖಸ್ಯ ಯಾಗೇऽಸ್ಮಿನ್ ಮಹತೀಶತ ದಕ್ಷಿಣಾ ।
ತವಾಪ್ಯರ್ಧಂ ಮಮಾಪ್ಯರ್ಧಂ ವಿಘ್ನಂ ಮಾ ಕುರು ಪಂಡಿತ ॥

ಯಾವುದೋ ಕುಗ್ರಾಮದಲ್ಲಿ ಹೆಡ್ಡನಾದ ಶ್ರೀಮಂತನೊಬ್ಬನಿದ್ದ. ಅವನಿಗೆ ಅರ್ಥಹೀನವಾದ ಕನಸೊಂದು ಬಿದ್ದಿತು. ಅದನ್ನು ಅರ್ಥೈಸಲು ಧೂರ್ತ ಬ್ರಾಹ್ಮಣನೊಬ್ಬನನ್ನು ಕೇಳಿದಾಗ ಆತನು ಈ ಶ್ರೀಮಂತನಿಂದ ಹಣವನ್ನು ಸುಲಿಯಲು ಇದೇ ಹದನಾದ ಸಮಯವೆಂದು ತಿಳಿದು ಮಹಾ ಭಯಂಕರವಾದ ಭಾವಿದುರ್ದಶೆಗೆ ಈ ಸ್ವಪ್ನವು ಸೂಚನೆಯೆಂದು ಅತಿವ್ಯಾಖ್ಯಾನ ಮಾಡಿ ಆ ಧನಿಕನನ್ನು ಅಂಜಿಸಿಬಿಟ್ಟ. ಆಗ ಭೀತಿಯಿಂದ ತತ್ತರಿಸಿದ ಧನಿಕನು ಪರಿಹಾರೋಪಾಯವನ್ನು ಕೇಳಲು ಈ ವಂಚಕನು 'ವಜ್ರಕುಂಠ'ವೆಂಬ ಕೃತಕ ಯಾಗವನ್ನು ಕಲ್ಪಿಸಿ ಹೇಳಿದ. ಅದನ್ನು ನಡೆಯಿಸುವುದಕ್ಕಾಗಿ ಅಪಾರ ಧನ ಬೇಕೆಂದೂ ತಿಳಿಸಿದ. ಧನಿಕನು ಇದಕ್ಕೊಪ್ಪಲು ಆ ಕೂಟಯಾಗ ಸಾಗಿತು. ಈ ಹಿನ್ನೆಲೆಯನ್ನರಿಯದ ಆ ಕುಗ್ರಾಮಕ್ಕೆ ಪ್ರಸಂಗವಶಾತ್ ಓರ್ವ ವಿದ್ವಾಂಸನು ಬಂದು ವಜ್ರಕುಂಠವೆಂಬ ಅಶ್ರುತಪೂರ್ವಯಾಗವಿದೇನೆಂದು ಸವಿಸ್ಮಯನಾಗಿ ಯಾಗಶಾಲೆಗೆ ಬರಲು ಈತನ ವಿದ್ಯೆಯನ್ನೂ, ಮುಂದೆ ಒದಗಲಿರುವ ಸ್ವಕೀಯ ಕೃತ್ರಿಮೋದ್ಘಾಟನವನ್ನೂ ಅರಿತ ಧೂರ್ತವಿಪ್ರನು ಆಹುತಿ ಮಂತ್ರಗಳ ನಡುವೆಯೇ ತ್ರೈಸ್ವರ್ಯದಿಂದ ಮೇಲಿನ ಶ್ಲೋಕವನ್ನು ಆ ಆಗಂತುಕ ಪಂಡಿತನಿಗೆ ಅನ್ವಯಿಸುವಂತೆ ಹೇಳಿದ.

ಈ ಹೆಡ್ಡನ ಯಾಗದಲ್ಲಿ ನೂರು ಎಮ್ಮೆಗಳ ದಕ್ಷಿಣೆ ಉಂಟು. ನನಗೂ ಅರ್ಧ, ನಿನಗೂ ಅರ್ಧ ಪಾಲು ದೊರೆಯುವುದು. ಅಡ್ಡಿಯನ್ನು ಮಾಡದಿರೋ ! ಪಂಡಿತಾ !"

ಇದನ್ನು ಕೇಳಿ ಅರ್ಥವನ್ನರಿತ ಆ ಪಂಡಿತನೇನು ಮಾಡಿದನೆಂಬುದು ನಮ್ಮ ಊಹೆಗೆ ಉಳಿದದ್ದು !

## —೧೦೦—

ಘೃತಪಾತ್ರವಿವೇಕೇ ಚ ದಧಿಮಾತ್ರಾಮಿತೌ ತಥಾ ।
ನಷ್ಟೌ ಖಲು ಮಹಾತರ್ಕವ್ಯಾಕೃತಿಜ್ಞೌ ವಿನಾಽಶನಂ ॥

ಒಬ್ಬ ರಾಜನ ಆಸ್ಥಾನಕ್ಕೆ ಇಬ್ಬರು ಪಂಡಿತರು ಆಗಮಿಸಿದರು. ತರ್ಕ ಮತ್ತು ವ್ಯಾಕರಣಗಳಲ್ಲಿ ಆ ವಿದ್ವಾಂಸರು ಕ್ರಮವಾಗಿ ಉದ್ದಂಡರು. ಅವರ ವಿದ್ಯಾವೈದುಷ್ಯಕ್ಕೆ ಮೆಚ್ಚಿ ರಾಜನು ಧನಸಂಮಾನವನ್ನು ಮಾಡಲಿರುವಾಗ ಮಂತ್ರಿಯು ಆ ಪಂಡಿತರ ಲೋಕಜ್ಞತೆ ತೀರ ಕಡಮೆಯೆಂದು ರಾಜನಿಗೆ ತಿಳಿಸಲು ಅವನು ಆ ವಿದ್ವಾಂಸರನ್ನು ಪರೀಕ್ಷಿಸಲು ನಿಶ್ಚೈಸಿದ. ಅಂತೆಯೇ ಪಂಡಿತರಿಬ್ಬರಿಗೂ ವಸತಿಯನ್ನು ಕಲ್ಪಿಸಿ ಸ್ವಯಂಪಾಕಕ್ಕೆ ಏರ್ಪಾಟನ್ನು ಮಾಡಿಸಿದ. ತರ್ಕಶಾಸ್ತ್ರಿಯು ಅಡುಗೆಗೆ ಮುನ್ನ ತುಪ್ಪವನ್ನು ತರಲೆಂದು ಪೇಟೆಗೆ ಹೊರಟ. ತುಪ್ಪವನ್ನೊಂದು ಪಾತ್ರೆಯಲ್ಲಿ ತರುವಾಗ ದಾರಿಯಲ್ಲಿ ಆತನಿಗೊಂದು ಸಂಶಯ ಬಂದಿತು—ತುಪ್ಪಕ್ಕೆ ಪಾತ್ರೆ ಆಧಾರವೇ ? ಪಾತ್ರೆಗೆ ತುಪ್ಪ ಆಧಾರವೇ ? ಎಂದು ! ಈ ಆಧಾರಾಧೇಯ ತರ್ಕದ ಜಿಜ್ಞಾಸೆಯನ್ನೆಷ್ಟು ಕೋಟಿಗಳೇರಿಸಿ ಯುಕ್ತಿ ಹೂಡಿದರೂ ಮುಗಿಸಲಾಗದ ಕಡೆಗೆ ಪಾತ್ರೆಯನ್ನೇ ಕವುಚಿಹಾಕಿ ಪ್ರಾಯೋಗಿಕವಾಗಿ ತಿಳಿಯಲಿಚ್ಛಿಸಿದ. ತುಪ್ಪ ಮಣ್ಣುಪಾಲಾಯಿತು : ಆದರೆ ತರ್ಕದ ತೊಡಕು ಪರಿಹಾರವಾಯಿತು.

ಇತ್ತ ವ್ಯಾಕರಣಶಾಸ್ತ್ರಿಯು ಮೊಸರಿಲ್ಲದುದನ್ನು ಕಂಡು ಅದನ್ನು ತರಲು ಹಾಗೂ ಪೇಟೆಗೆ ಹೊರಟ. ಅಲ್ಲಿ ಗೌಳಿಗ ಹೆಂಗುಸೊಬ್ಬಳು 'ಮೊಸರೂಽಽ' ಎಂದು ಕೂಗುತ್ತಾ ಮಾರುವುದನ್ನು ಕಂಡು ಕೂಡಲೇ ಅಲ್ಲಿ ಧಾವಿಸಿ "ಮೊಸರು ಎನ್ನುವುದು ಉಕಾರಾಂತ ನಪುಂಸಕಲಿಂಗ ಶಬ್ದ. ಅದನ್ನು ಊಕಾರಾಂತವಾಗಿ, ಪ್ಲುತವಾಗಿ ಎಳೆಯುವುದು ಅಪಾಣಿನೀಯ, ಅಶಾಸ್ತ್ರೀಯ" ಎಂದು ಜಗಳಕ್ಕೆ ನಿಂತ. ಆಕೆ ಇವನಾರೋ ಹುಚ್ಚನೆಂದು ಮುನಿದು ಹಳಿದು ದೂರಸರಿದಳು. ಮೊಸರಂತೂ ಸಿಗಲಿಲ್ಲ. ಹೀಗೆ ತುಪ್ಪ-ಮೊಸರಿಲ್ಲದೆ ತುತ್ತನ್ನೆತ್ತಲಾರದ ಪಂಡಿತರು ಅಂದು ಉಪೋಷ್ಯ ಮಾಡಿದರು.

ಇದನ್ನೆಲ್ಲ ಗೂಢಚಾರರಿಂದ ತಿಳಿದ ಮಂತ್ರಿ ರಾಜನಿಗೆ ಸಾರಾಂಶವನ್ನು ಮೇಲಿನ ಶ್ಲೋಕದ ಮೂಲಕ ತಿಳಿಸಿದ "ತುಪ್ಪ-ತಪ್ಪಲೆಗಳ ತೊಡಕಿನಲ್ಲಿ, ಮೊಸರಿನ ಗೊಂದಲದಲ್ಲಿ ಸಿಲುಕಿದ ಮಹಾತಾರ್ಕಿಕ-ವೈಯಾಕರಣರು ಊಟ ವಿಲ್ಲದೆ ಒದ್ದಾಡಿದರು"

ರಾಜನು ತಾತ್ಪರ್ಯವನ್ನರಿತು ಬಳಿಕ ಆ ಪಂಡಿತರಿಗೆ ಬುದ್ಧಿಹೇಳಿ ಸತ್ಕರಿಸಿದ.

—೧೦೧—

ಕ್ಷೋಮಪತ್ರಪ್ರಮಾಣೇನ ಮಾಂಗಲ್ಯರಚನಂ ತಥಾ ।
ಶುಭಂ ದಿನಂ ಚ ಧೂರ್ತಾನಾಂ ಕುರ್ವೀತ ಬುಧಸೋಮಯೋಃ ॥

ಒಂದು ಗ್ರಾಮದಲ್ಲಿ ಪರಮಮೂರ್ಖನಾದ • ಪುರೋಹಿತನೊಬ್ಬನಿದ್ದ. ಆತನಿಗೆ ಆ ಗ್ರಾಮದಲ್ಲಿ ತನ್ನ ಪೂರ್ವಿಕರ ಖ್ಯಾತಿಯಿಂದಾಗಿ ಗೌರವ ಉಳಿದಿತ್ತು. ಮುಗ್ಧರಾದ ಗ್ರಾಮಸ್ಥರು ಆತನನ್ನೂ ಪಂಡಿತನೆಂದು ತಿಳಿದಿದ್ದರು. ಒಮ್ಮೆ ನೆರೆಯೂರಿನಲ್ಲಿ ವಿವಾಹ ನಿಶ್ಚಿತಾರ್ಥಕ್ಕಾಗಿ ಈ ಪುರೋಹಿತ ತೆರಳಿದ. ಅಲ್ಲಿ

ಕನ್ಯಾಪಿತೃವು ಹುಡುಗಿಯ ಮಾಂಗಲ್ಯವು ಎಂಥ ಪ್ರಮಾಣ(ಆಕಾರ)ದಲ್ಲಿರಬೇಕೆಂದೂ, ಒಡವೆ ಮಾಡಿಸಲು ಎಂಥ ವಾರ ಒಳ್ಳೆಯದೆಂದೂ ಕೇಳಲು ಈ ಬೃಹಸ್ಪತಿಯು ಮೇಲಿನ ಶ್ಲೋಕವನ್ನು ಶಾಸ್ತ್ರೀಯ ಪ್ರಮಾಣವೆಂದು ಉದ್ಧರಿಸಿದ.

"ಬನ್ನಿಯ ಎಲೆಯ ಆಕಾರದಲ್ಲಿ ತಾಳಿಯನ್ನು ಮಾಡಿಸಬೇಕು, ಸೋಮವಾರ ಮತ್ತು ಬುಧವಾರಗಳಂದು ಒಡವೆಗಳನ್ನು ಮಾಡಿಸಬಹುದು" ಈ ಮಾತನ್ನು ಕೇಳಿ ಅಲ್ಲಿದ್ದ ಪ್ರಾಜ್ಞರೊಬ್ಬರು ತೌಹಾರಿ ಯಥಾರ್ಥ ತಿಳಿಸಿದರು. ಅದೇನೆಂದರೆ 'ಶಮೀಪತ್ರಪ್ರಮಾಣೇನ ಪಿಂಡಂ ದದ್ಯಾದ್ಗಯಾ ಭುವಿ" ಮತ್ತು "ಆಯುಷ್ಕರ್ಮವಿಧಾನಂ ತು ಕುರ್ವೀತ ಬುಧಸೋಮಯೋಃ" ಎಂದು ವಾಸ್ತವವಾಗಿ ಇರುವುದು ! (ಗಯೆಯಲ್ಲಿ ಶಮೀಪತ್ರಪ್ರಮಾಣದಲ್ಲಿ ಪಿಂಡವನ್ನಿಡಬೇಕು ; ಕ್ಷೌರವನ್ನು ಸೋಮವಾರ ಅಥವಾ ಬುಧವಾರ ಮಾಡಿಕೊಳ್ಳಬಹುದು ಎಂದು ಶಾಸ್ತ್ರೋಕ್ತಿ !!)

ಹೀಗೆ ಆ ಪಂಡಿತಂಮನ್ಯನ ಪೆದ್ದತನ ಬಯಲಾದಮೇಲೆ ಮೇಲೂ ಆಪಾತತಃ ಗಂಭೀರವಾದ, ವಸ್ತುತಃ ಅನನ್ವಯವಾದ ಶ್ಲೋಕವು ಇಂಥ ಅರೆ ಬರೆ ವಿದ್ವಾಂಸರ ಲೇವಡಿಗಾಗಿ ಬಳಕೆಗೆ ಬಂದಿತು.

—೧೦೨—

'ದಶರಾಮಶರಾಃ' ಭೇದವಿವೇಕ ರಹಿತಂ ಪತಿಂ ।
ದಧಿಮಾನಯ ವೈದುಷ್ಯಂ ಸತೀ ತಕ್ರೇಣ ರಕ್ಷತಿ ॥

ಒಬ್ಬ ಪಂಡಿತನಿಗೆ ಮಹಾವಿದುಷಿಯಾದ ಹೆಂಡತಿಯಿದ್ದಳು. ಆತನ ವ್ಯಾಕರಣಜ್ಞಾನ ಶೂನ್ಯ. ಒಮ್ಮೆ ಹಲವರು ವಿದ್ವದ್ರಸಿಕರು ಮನೆಗೆ ಬಂದಾಗ

ಊಟಿನ ಸಂದರ್ಭದಲ್ಲಿ ಯಾರೋ "ದಶರಾಮಶರಾ ಘೋರಾಃ" ಎಂದು ಆರಂಭಿಸಿ ಶ್ಲೋಕವೊಂದನ್ನು ಹೇಳಿದರು. ಆಗ ಈ ಶುಂಠನು ಅದನ್ನು ದಶ + ರಾಮಶರಾಃ + ಘೋರಾಃ ಎಂದು ಅನ್ವಯಿಸಿಕೊಳ್ಳದೆ ಶ್ಲೋಕದಲ್ಲಿರುವ ಸಂಹಿತಾನಿಯಮಾನುಸಾರ 'ದಶರಾಮಶರಾ' ಎಂದಾದ ಪದಪುಂಜವನ್ನು ದಶರಾ + ಮಶರಾ ಎಂದು ತಪ್ಪುತಪ್ಪಾಗಿ ಅರ್ಥೈಸಿ ಪೇಚಿಗೆ ಬಿದ್ದ. ಬಂದ ಅತಿಥಿಗಳಿಗೆ ಈ ಪಂಡಿತಂಮನ್ಯನ ಬಂಡವಾಳ ಬಯಲಾಗುತ್ತಾ ಬಂದಿತು. ಆದರೂ ಸಭ್ಯತೆಯಿಂದ ಸುಮ್ಮನಿದ್ದರು. ಊಟಕ್ಕೆ ಕುಳಿತಾಗಲೂ "ಮೊಸರನ್ನು ತಾ" ಎಂದು ಆತ ಪತ್ನಿಗೆ ಸಂಸ್ಕೃತದಲ್ಲಿ ತಿಳಿಸುವಾಗ ದಧಿಂಆನಯ> ದಧಿಮಾನಯ ಎಂದು ತಪ್ಪುಮಾಡಿದ (ವಸ್ತುತಃ ದಧಿ ನಪುಂಸಕಲಿಂಗದ ಇಕಾರಾಂತ ಶಬ್ದ. ದ್ವಿತೀಯಾವಿಭಕ್ತಿಯಲ್ಲಿಯೂ 'ದಧಿ' ಎಂದೇ ಆಗುತ್ತದೆ 'ದಧಿಂ' ಎಂಬುದು ದೋಷ) ಉಳಿದವರು ನಗಲಾರಂಭಿಸಿದ್ದರು. ಆದರೆ ಜಾಣೆ ಹೆಂಡತಿಯು ಮೊಸರನ್ನು ತಾರದೆ ನೀರು ಮಜ್ಜಿಗೆಯನ್ನು ತಂದು ದಧಿ + ಮಾ + ಆನಯ (ಮೊಸರನ್ನು ತರಬೇಡ) ಎಂದಿರಲ್ಲಾ ಅದಕ್ಕಾಗಿ ಮಜ್ಜಿಗೆ ತಂದೆನೆಂದು ಹೇಳಿ ಗಂಡನ ಮಾನವುಳಿಸಿದಳು. ಈಕೆಯ ಚಾತುರ್ಯಕ್ಕೆ ಮುಗ್ಧನಾದ ರಸಿಕನೊಬ್ಬ ಮೇಲಿನ ಶ್ಲೋಕವನ್ನು ರಚಿಸಿದ.

" 'ದಶರಾಮಶರಾ' ಎಂಬ ಸಮಸ್ತಪದದ ಸ್ವರೂಪವನ್ನರಿಯದ ಪೆದ್ದ ಗಂಡನನ್ನು ; ದಧಿಂ ಆನಯ ಎಂಬ ಮಾತುಗಳ ಮಡೆಯನ್ನು ಜಾಣೆ ಹೆಂಡತಿಯು ಮಜ್ಜಿಗೆಯಿಂದ ಕಾಪಾಡುತ್ತಾಳೆ !'!"

ಪ್ರಾಥಮಿಕ ವ್ಯಾಕೃತಿವಿವೇಕವೂ ಇಲ್ಲದವರ ಪಾಡನ್ನು ವಿಡಂಬಿಸಲು ಇಂಥ ಕಥೆಗಳೆಷ್ಟೋ ಪಂಡಿತಲೋಕದಲ್ಲಿ ರಂಜನಾರ್ಥ ಚಾಲ್ತಿಯಲ್ಲಿವೆ.

## ೧೦೩

ಪುರಶ್ಚೂಡೇಷು ಸರ್ವೇಷು ತ್ರಯ ಏವ ಹಿ ಸಾಧವಃ ।
ಅಜಾತಶ್ಚ ಮೃತಶ್ಚೈವ ಚಿತ್ರೇಽಪಿ ಲಿಖಿತಸ್ತಥಾ ॥

ಶಿಖೆ (ಜುಟ್ಟು)ಯನ್ನು ಅವರವರ ಗೋತ್ರ-ಸೂತ್ರ-ಶಾಖೆಗಳ ನಿಯಮಕ್ಕನುಸಾರವಾಗಿ ಬೆಳೆಸಬೇಕೆಂದು ಧರ್ಮಶಾಸ್ತ್ರಗಳ ವಿಧಿ. ಸಾಮಾನ್ಯವಾಗಿ ಬಹುತೇಕ ಶಿಖಾಧಾರಿಗಳೆಲ್ಲ ಪೃಷ್ಠಚೂಡರು—ಅಂದರೆ ಹಿಂಬದಿಗೆ ಜುಟ್ಟು ಬಿಟ್ಟವರು.

ಕೇರಳದ ನಂಬೂದಿರಿಗಳು ಮಾತ್ರ ಮುಂದೆಲೆಯಾಗಿ ಬರುವಂತೆ ಶಿಖೆಯಾಗಿ ಪುರಶ್ಚೂಡರೆನಿಸಿದ್ದಾರೆ. ಇವರ ಶಿಖೆಗಳು ಮುಂಭಾಗಕ್ಕೆ ಬರುತ್ತವೆ. ಅತೀವ ಸಾಂಪ್ರದಾಯಿಕರೂ, ಪ್ರಗಲ್ಭವಿದ್ವಾಂಸರೂ ಆದ ಈ ವರ್ಗ ತಮ್ಮ ಮಡಿ-ಆಚಾರ-ವ್ಯವಹಾರ ಮೊದಲಾದುವುಗಳಿಂದಾಗಿ ಇತರರಿಗಿಂತ ವಿಶೇಷವೆನಿಸಿ ಭಿನ್ನೈಸಿದ್ದಾರೆ. ಇವರು ಹಿಂದೆ ಕೇರಳದಲ್ಲಿ ಭೂಸ್ವಾಮಿಗಳಾಗಿ, ವಿದ್ಯಾನಿಧಿಗಳಾಗಿ ಅತ್ಯುನ್ನತ ಗೌರವವನ್ನು ಪಡೆಯುತ್ತಿದ್ದಾಗ ಈ ವರ್ಗದ ಛಾಂದಸ ಬುದ್ಧಿ, ಪ್ರತ್ಯೇಕತೆ, ಬಿಗುಮಾನಗಳು ಇತರರಿಗೆ ಗೇಲಿಯ ವಸ್ತುಗಳೂ ಆಗಿದ್ದವು. ಆ ಸಂದರ್ಭದಲ್ಲಿ ರಚಿತವಾಗಿದ್ದಿರಬಹುದಾದದ್ದು ಮೇಲಣ ಅಜ್ಞಾತಕರ್ತೃಕ ಶ್ಲೋಕ.

"ಮುಂಜುಟ್ಟಿರುವವರಲ್ಲಿ ಮೂರೇ ವರ್ಗದವರು ಭೋಳೇಸ್ವಭಾವದವರು—ಅವರಾರೆಂದರೆ ಹುಟ್ಟದವರು, ಸತ್ತವರು ಹಾಗೂ ಚಿತ್ರಿತರಾದವರು!!" ತಾತ್ಪರ್ಯದಿಂದ ಇದ್ದವರಾರೂ ಮುಗ್ಧರಲ್ಲ ಎಂದೇ ಸರಿ! ಈ ಶ್ಲೋಕದ ಕಡೆಯ ಪಾದದಲ್ಲಿ 'ಚಿತ್ರೇಽಪಿ ಲಿಖಿತಸ್ತಥಾ' ಎಂಬುದು 'ಚಿತ್ರೇಽಪ್ಯಲಿಖಿತಸ್ತಥಾ' ಎಂಬ ಪಾಠಾಂತರದಿಂದ ಚಿತ್ರದಲ್ಲಿಯೂ ಇಲ್ಲದವರೆಂಬ ಅರ್ಥ ಬರುವಂತೆಯೂ ಚಲವಣೆ ಪ್ರಚಾರದಲ್ಲಿದೆ. ಇದಕ್ಕೊಂದು ಕಥೆಯೂ ಉಂಟು.

ಒಮ್ಮೆ ಬೀದಿಯಲ್ಲಿ ಬಿದ್ದಿದ್ದ ಮಣ್ಣುಹೆಂಟೆ, ಊಟದೆಲೆ ಹಾಗೂ ಮುಂಜುಟ್ಟಿನವನ ಚಿತ್ರಗಳನ್ನು ಕಂಡ ವಿಧಿಯು ಮಳೆಗಾಳಿಗಳಿಂದ ಮಣ್ಣು ಹೆಂಟೆ-ಊಟದೆಲೆಗಳನ್ನು ನಾಶಪಡಿಸಲು ನಿಶ್ಚಯಿಸಿತಂತೆ. ಆಗ ಚಿತ್ರಗತನಾದ ಮುಂಜುಟ್ಟಿನವನು ಎಲೆ ಹಾರಿಹೋಗದಂತೆ ಅದರ ಮೇಲೆ ಹೆಂಟೆಯೂ, ಹೆಂಟೆಕರಗಿಹೋಗದಂತೆ ಅದನ್ನಾವರಿಸಿದ ಎಲೆಯೂ ಇರುವಂತೆ ನಿಯೋಜಿಸುವ ಸಲಹೆಕೊಟ್ಟು ಅವೆರಡನ್ನೂ ರಕ್ಷಿಸಿ ವಿಧೀಚ್ಛೆಯನ್ನೇ ಮುರಿದನಂತೆ. ಆಗ ವಿಧಿಯೇ ಈ ಪಾಠಾಂತರ ಕೊಟ್ಟಿತಂತೆ !

—೧೦೪—

ವೇಣೀಸಂಹಾರಮಾಕಲ್ಪ್ಯೇ ಪಿತಾನೇ ವಂಶನಾಶನಂ ।
ಭೋಜನೇ ಚ ಚಿತುಸ್ಸ್ಥಾನಂ ವಿವಾಹೇ ಭಾಂತಿ ಧೀಮತಃ ॥

ಒಬ್ಬ ಪಂಡಿತನಿದ್ದನಂತೆ. ಆತ ಸದಾ ಕಾಲವೂ ತನ್ನ ವಿಲಕ್ಷಣ ಪಾಂಡಿತ್ಯದಿಂದ ಬಳಕೆಯಲ್ಲಿದ್ದ ಪದಗಳಿಗೆ ಬದಲಾಗಿ ಬೇರೊಂದನ್ನು ಬಳಸಿ ಅವುಗಳಿಗಿದ್ದ ಅನ್ಯಾರ್ಥಗಳಿಂದ ಸಾಮಾನ್ಯಜನತೆಗೆ ಉದ್ವೇಜನವನ್ನುಂಟು ಮಾಡುತ್ತಿದ್ದ.

ಆತನನ್ನು ಕುರಿತದ್ದೇ ಮೇಲಣ ಶ್ಲೋಕ.

ಒಮ್ಮೆ ಈ ಪಂಡಿತನು ತನ್ನ ಪರಿಚಿತರೊಬ್ಬರ ಮನೆಯ ಮದುವೆಗೆ ಹೋದ. ಅಲ್ಲಿ ವಧುವಿಗೆ ಜಡೆಹಣಿಗೆಯ ಕೆಲಸವನ್ನು ತರುಣಿಯರು ಸಂಭ್ರಮದಿಂದ ನಡೆಸಿದ್ದಾಗ 'ಇದೇನು ವೇಣೀ ಸಂಹಾರವೋ?' ಎಂದನಂತೆ ! (ವೇಣೀ ಸಂಹಾರವೆಂದರೆ ತಲೆಗೂದಲನ್ನು ಕತ್ತರಿಸುವುದೆಂದೂ, ತಲೆಗೂದಲ ಹಣಿಗೆಯಿಂದೂ—ವೇಣೀಸಮಾಹಾರ—ಎರಡು ಅರ್ಥಗಳುಂಟು) ಬಳಿಕ ಹಸೆಯ ಮೇಲೆ ಹಾಕಿದ್ದ ಚಪ್ಪರವನ್ನು ಕಂಡು ಅದಕ್ಕಾಗಿ ಬಳಕೆಯಾಗಿದ್ದ ಬಿದಿರುಗಳುಗಳನ್ನು ದಿಟ್ಟಿಸಿ 'ಬಹಳ ವಂಶನಾಶನವಾಗಿದೆಯಲ್ಲಾ' ಎಂದನಂತೆ !

('ವಂಶ' ಎಂದರೆ ಕುಲ ಹಾಗೂ ಬಿದಿರು ಎಂಬರ್ಥಗಳುಂಟು) ಕತೆಗೆ ಊಟಕ್ಕೆ ಎಲ್ಲರೂ ಕುಳಿತಾಗ ವರನ ತಂದೆತಾಯ್ಗಳಿಗಾಗಿ ನಿಯಮಿತವಾಗಿದ್ದ ಪ್ರತ್ಯೇಕಾಸನವನ್ನು ಕಂಡು 'ಇದೇನು ಪಿತೃಸ್ಥಾನವೋ ?' ಎಂದು ಪ್ರಶ್ನಿಸಿದನಂತೆ ! (ಪಿತೃಸ್ಥಾನ ಎಂದರೆ ತಂದೆಯ ಸ್ಥಳ ಎಂದು ಅಕ್ಷರಶಃ ಅರ್ಥವಾದರೂ ಇದರ ಬಳಕೆ ಕೇವಲ ಶ್ರಾದ್ಧಗಳಲ್ಲಿ ಮಾತ್ರ !) ಈ ಬಗೆಯಲ್ಲಿ ಶುಭಸಂದರ್ಭಕ್ಕೆ ಆಪಾತತಃ ಅಶುಭಾರ್ಥಕಗಳಾದ ಮಾತುಗಳನ್ನಾಡಿ ಸೇರಿದಜನಕ್ಕೆಲ್ಲ ಮುನಿಸು ತಂದನೆಂದೂ, ಚಮತ್ಕಾರಪ್ರಿಯರಾದ ಕೋವಿದರಿಗೆಲ್ಲ ಮೆಚ್ಚುಗೆ ಮೂಡಿಸಿದನೆಂದೂ ಅಭಿಪ್ರಾಯಗಳುಂಟು.

"ಅಲಂಕಾರದಲ್ಲಿ ವೇಣೀಸಂಹಾರ, ಚಪ್ಪರದಲ್ಲಿ ವಂಶನಾಶನ, ಊಟದಲ್ಲಿ ಪಿತೃಸ್ಥಾನವು ಮದುವೆ ಮನೆಗೆ ಬಂದ ಕದುಜಾಣನಿಗೆ ಕಾಣುತ್ತವೆ !!"

—೧೦೫—

ಪರಾಧಾರಹೀನೋ ನ ಯಾತ್ಯನ್ಯವಾರ್ತಾಂ
ವಿನಾ ನಿರ್ಣಯೋಽಪ್ಯೋ ಮಹಾಧಾರವಾಹಾತ್ ।
ಸ್ವಕಂ ಜೀವನಂ, ಮೇಘತುಲ್ಯಸ್ಸುತೋ ಮೇ:
ವೃಣೋಮ್ಯಾರ್ಯ ತಸ್ಯಾಸ್ತ್ವ ಪತ್ನೀ ಶಿರಾಸ್ಯಾ ॥

ಕಾಶಿಯಲ್ಲಿ ದರಿದ್ರನೊಬ್ಬನ ಮಗಳು ಮನೋಜ್ಞೆ, ತುಂಬ ಬುದ್ಧಿಶಾಲಿನಿ. ಒಮ್ಮೆ ನಗರದಲ್ಲಿ "ನರಪತಿಯೆಂಬಾತನಮಗನಿಗೆ ಕನ್ಯೆ ಬೇಕಾಗಿದ್ದಾಳೆ. ವರನಿಗೆ ಆಧಾರವಿಲ್ಲದೆ ನಡೆಯಲು ಬಾರದು, ಸ್ವಂತಸರ್ಗಯು ತಿಳಿಯದು. ಹೊರೆ ಹೊತ್ತು ಬದುಕುತ್ತಾನೆ. ಮೇಘದಂಥವನು. ಇಷ್ಟವಿದ್ದವರು ಸಂಜೆ ಧರ್ಮಸತ್ರಕ್ಕೆ ಬರಬಹುದೆ"ಂದು ಡಂಗೂರ ಸಾರಿಕೆಯಾಯಿತು. ಇದನ್ನು ಕೇಳಿ ಕಿಂಚಿತ್ಕಾಲ ಚಿಂತಿಸಿ ಮನೋಜ್ಞೆಯು ಅಲ್ಲಿಗೆ ಹೋಗಲೇಬೇಕೆಂದು

ಹಠ ಹಿಡಿದು ತಂದೆಗೆ ಇಷ್ಟವಿಲ್ಲದಿದ್ದರೂ ಆ ಸಂಜೆ ಸತ್ರವನ್ನು ಸೇರಿದಳು. ಅಲ್ಲಿ ಉದಾತ್ತವ್ಯಕ್ತಿತ್ವದ ಪ್ರೌಢನೊಬ್ಬನು ಅವರ ಪೂರ್ವೋತ್ತರಗಳನ್ನು ವಿಚಾರಿಸಿ ಬಳಿಕ 'ಮಗಳೆ! ನನ್ನ ಮಗನ ಪರಿಸ್ಥಿತಿಗೊತ್ತಿಲ್ಲವೇ' ಎಂದು ಮೇಲಿನ ಭುಜಂಗಪ್ರಯಾತದ ಮೂರು ಸಾಲುಗಳನ್ನು ಹೇಳಿದ. ಕೂಡಲೇ ಮನೋಜ್ಞೆಯು ನಾಲ್ಕನೆಯ ಪಾದವಾಗಿ ತನ್ನ ಅಂಗೀಕೃತಿ ತಿಳಿಸಿದಳು 'ಆರ್ಯ! ಆತನನ್ನು ಒಪ್ಪಿದ್ದೇನೆ. ಈಗಾಗಲೇ ಅವನಿಗೆ ಒಬ್ಬ ಹೆಂಡತಿ ಇರುವಾಗ ನನಗೇಕೆ ಹಿಂಜರಿಕೆ ?' ಕೂಡಲೇ ಆತನಿಗೆ ಆನಂದವಾಯಿತು. ಮನೋಜ್ಞೆಯ ತಂದೆಗೆ ಮೈ ಉರಿದು ಮಗಳಿಗೆ ಮತಿಭ್ರಮೆಯಾಯಿತೆಂದೇ ತಿಳಿದ. ಆಗ ಅವಳು ಒಗಟು ಬಿಡಿಸಿದಳು. ಧರ್ಮದ ಆಧಾರವಿಲ್ಲದೆ ನಡೆಯಲಾರ, ವಿವೇಕಿ ಮಂತ್ರಿಗಳ ಸಲಹೆ ಇಲ್ಲದೆ ನಿರಂಕುಶವಾಗಿ ನಿರ್ಣಯಿಸಲಾರ, ರಾಜ್ಯ 'ಧಾರ'ದಿಂದ ಬದುಕುತ್ತಾನೆ. ಮೇಘದಂತೆ ಜೀವನಾಧಾರ; ಸಮುನ್ನತ ವ್ಯಕ್ತಿತ್ವವುಳ್ಳಾತ. ಇವನ ಮೊದಲ ಹೆಂಡತಿ ರಾಜ್ಯಲಕ್ಷ್ಮಿಯೇ!

ಅದು ನಿಜವೇ ಆಗಿದ್ದಿತು. ಮನೋಜ್ಞೆಯ ಬುದ್ಧಿಚಾತುರಿ ಆಕೆಯನ್ನು ಕಾಶೀರಾಜನ ಸೊಸೆಯನ್ನಾಗಿತ್ತು. ಹೀಗೆ ಪ್ರಾಚ್ಯಭಾರತದಲ್ಲಿ ವಿದ್ಯಾವತಿಯರಾದ ಮಹಿಳೆ ಯಾವ ಸ್ತರದಲ್ಲಿಂದ ಬಂದರೂ ಗೌರವ ದೊರೆಯುತ್ತಿತ್ತು.

—೧೦೬—

ಅನವೇಮಮಹೀಪಾಲ! ಸ್ವಸ್ತ್ಯಸ್ತು ತವ ಬಾಹವೇ।
ಆಹವೇ ರಿಪುದೋರ್ದಂಡಚಂದ್ರಮಂಡಲರಾಹವೇ ॥

ಹಿಂದೆ ಅನವೇಮನೆಂಬ ಸಂಸ್ಥಾನಾಧಿಪತಿಯ ಬಳಿ ಕವಿಯೊಬ್ಬ ಹೋಗಿ ಮೇಲಿನ ಶ್ಲೋಕವನ್ನು ಅವನ ಪರಾಕ್ರಮಪ್ರಶಂಸೆಯಾಗಿ ಹೇಳಿದ "ಅನವೇಮ

ರಾಜನೇ ! ಯುದ್ಧದಲ್ಲಿ ವೈರಿಗಳ ತೋಳೆಂಬ ಚಂದ್ರನಿಗೆ ರಾಹುವಿನಂತಿರುವ ನಿನ್ನ ತೋಳುಗಳಿಗೆ ಮಂಗಳವಾಗಲಿ"

ಅಂಥ ಅಪೂರ್ವಚಮತ್ಕಾರವಿಲ್ಲದಿದ್ದರೂ ಅನುಘಟಿತಿಯ ಶಬ್ದಲಾಲಿತ್ಯವಿರುವ ಈ ಶ್ಲೋಕಕ್ಕೆ ಮೆಚ್ಚಿ ಆ ರಾಜನು ತೆಲುಗಿನಲ್ಲಿ ಮೂರು ಸಾವಿರ ಹೊನ್ನು ಕೊಡುವೆ(ಮೂಡು ವೇಲು)ನೆಂದು ಹೇಳಿದನಂತೆ. ಆಗ ಕವಿ ಸಮಯ ಸ್ಫೂರ್ತಿಯಿಂದ ತಾನೀಗಲೇ ರಾಜನಿಗೆ ನಾಲ್ಕು ಸಾವಿರ ಕೊಟ್ಟಿದ್ದೇನೆಂದ ! (ತೆಲುಗಿನಲ್ಲಿ ವೇಲು ಎಂದರೆ ಸಾವಿರ ಎಂದೂ, 'ವೇ' ಗಳು ಎಂದೂ ಅರ್ಥ ! ಮೇಲಣ ಶ್ಲೋಕದಲ್ಲಿ ನಾಲ್ಕು 'ವೇ' ವರ್ಣಗಳಿವೆ !!) ರಾಜನಾಗ ಐದುಸಾವಿರ ಕೊಡಲೆಳಸಿದಾಗ ಕವಿ ತಾನು ಆರುಸಾವಿರವೇಲನಿಯೋಗಿ ಬ್ರಾಹ್ಮಣ ಕುಲದವನೆಂದ (ಆರುವೇಲನಿಯೋಗಿ) ! ರಾಜನಾಗ ಏಳುಸಾವಿರ ಎನ್ನಲು ಕವಿ ಅದು ಅಮಂಗಳಸಂಖ್ಯೆಯೆಂದ. ಕಡೆಗೆ ರಾಜನು ಈತನ ಚಮತ್ಕಾರದ ಮಾತುಗಳಿಗೆ ಮೆಚ್ಚಿ ಎಂಟುಸಾವಿರ ಹೊನ್ನು ಕೊಟ್ಟನೆಂದು ಕಥೆ.

ಅಕ್ಷರಲಕ್ಷ-ಕನಕಾಭಿಷೇಕ-ಗಜಾರೋಹಣ-ಕವಿಗಂಡಪೆಂಡೇರ- ರತ್ನಕಿರೀಟ ಸಿಂಹತಲಾಟಕಂಕಣವೇ ಮೊದಲಾದ ಇತರ ಮಹಾಸತ್ಕಾರಗಳು ಕಥೆಯಾಗಿಯೂ, ಸತ್ಯಸಂಗತಿಯಾಗಿಯೂ ಹಲವು ಬಾರಿ ಸಹೃದಯರ ಶ್ರುತಿಪಥಕ್ಕೆ ಬಂದಿರುವಾಗ ಈ ಕಥೆಯೂ ಅವಾಸ್ತವವಾಗಲಾರದೆಂದು ಗ್ರಹಿಸಬಹುದಲ್ಲವೇ !

-೧೦೭-

ಅಜಾಗಲಸ್ಥಸ್ತನಮುಷ್ಟವೃತ್ತಂ ಅಂಡದ್ವಯಂ ವಾಜಿಗಲೇ ಚ ಕೇಶಂ ।
ವೃಥಾಽಸೃಜತ್ಸ್ಮಾಹಿಗಮಾರಭೂಪಂ ಪ್ರಜಾಂ ನ ಲೇಭೇ ಭುವಿ ಪದ್ಮಯೋನಿಃ॥

ಶ್ರೀಯುತರಲ್ಲಿ ಉದಾರತೆ ಇಲ್ಲದಿದ್ದರೆ ವಾಕ್ಶ್ರೀಯುತರು ಕೆಲವರು ಹೇಗೆ ಕಟೂಕ್ತಿಗಳಿಂದ ಆ ಪ್ರಭುವನ್ನು ಚಿರಕಾಲ ಗೇಲಿಯ ವಸ್ತುವನ್ನಾಗಿ

ಬಿಡುವರೆಂಬುದಕ್ಕೆ ಈ ಪದ್ಯ ಸಾಕ್ಷಿ. ದಾನಿಯಲ್ಲದ ಧನಿಕನನ್ನು ನಿರ್ದಾಕ್ಷಿಣ್ಯ ವಾಗಿ ನಿಂದಾಬಂಧಗಳಿಂದ ಭವಿಷ್ಯತ್ತಿನ ಹೊಳೆಗೆ ಎಸೆದುಬಿಡುವರೆಂಬುದಕ್ಕೆ ಹತ್ತಾರು ಉಜ್ಜ್ವಲ ನಿದರ್ಶನಗಳಿವೆ. ಹೊಗಳಿಕೆಯಿಂದ ಧನಿಕನ/ನೃಪನ ಕೀರ್ತಿ ಉಳಿದು ಬಂದಂತೆಯೇ ತೆಗಳಿಕೆಯಿಂದಲೂ ಅಂಥವರ ಹೆಸರು ಹಸುರಾಗಿ ನಿಲ್ಲುವುದರಿಂದ ಕವಿಗೆ ಮನಸ್ಸಾದರೂ, ಮುನಿಸಾದರೂ ಒಡೆಯರಿಗೆ ನಷ್ಟವಿಲ್ಲ! ಅಂತೆಯೇ ರಸಿಕರಿಗೆ ರಾಜಸ್ತುತಿಗಳ ವೆಗಟಾಗುವಂಥ ಸಿಹಿಯ ನಡುವೆ ಚುರುಕಾದ ನಿಂದೆಗಳು ವಕ್ರೋಕ್ತಿಯ ಮಸಾಲೆಗಳಿಂದ ಸುರುಗಾಗಿ ನಾಲಿಗೆ ಕೆರಳಿಸಿ ಮತ್ತಷ್ಟು ರುಚಿಯಾಗುತ್ತವೆ.

ಆಂಧ್ರದ ಒಂದು ಸಂಸ್ಥಾನದಲ್ಲಿ ದೊಡ್ಡ ಸ್ಥಾನವನ್ನಲಂಕರಿಸಿದ್ದ (ಪ್ರಾಯಶಃ ಸೇನಾಧಿಕಾರಿಯಾಗಿದ್ದ) ಸಾಹಿಣಮಾರನ ಎಂಬ ಧನಿಕನು ಕವಿ ಗೊಬ್ಬನಿಗೆ ಕೊಡುಗೈನೆರವನ್ನೀಯಲಿಲ್ಲ. ಆಗ ಮುನಿದ ಕಬ್ಬಿಗನು ಮೇಲಣ ಪದ್ಯವನ್ನು ಆಶುವಾಗಿ ಹಾಡಿ ಹೀಯಾಳಿಸಿದನಂತೆ

"ಮೇಕೆಯ ಕೊರಳಿನ ಮೊಲೆಗಳನ್ನೂ, ಒಂಟೆಯ ಬಾಲವನ್ನೂ, ಕುದುರೆಯ ಕತ್ತಿನ ಮೇಲಿರುವ ಜೂಲನ್ನೂ, ಅಂಡಕೋಶಗಳೆರಡನ್ನೂ, ಈ ಸಾಹಿಣಮಾರನನ್ನೂ ವೃಥಾ ಸೃಷ್ಟಿಮಾಡಿದುದರಿಂದಲೇ ಆ ಬ್ರಹ್ಮನು ಭೂಮಿ ಯಲ್ಲಿ ಪೂಜೆಯನ್ನು ಪಡೆಯಲಿಲ್ಲ!"

ಮೊನಚಾದ ಈ ನುಡಿಗಳು ಹೇಗೆ ನಿರುಪಯೋಗಿವಸ್ತುಗಳ ಸಾಲಿಗೆ ಲೋಭಿಯನ್ನು ಸೇರಿಸಿ ತನ್ಮೂಲಕ ಕಾವ್ಯಲಿಂಗಾಲಂಕಾರದಿಂದ ಬ್ರಹ್ಮನಿಗೆ ಸಿಗದ ಪೂಜೆಗೂ ಕಾರಣ ಹೇಳಿ ಪ್ರೌಢಿಯನ್ನು ಮೆರೆದಿವೆಯೆಂಬುದಕ್ಕೆ ವ್ಯಾಖ್ಯಾನವು ಪ್ರತ್ಯೇಕವಾಗಿ ಬೇಕೇ ?

-೧೦೮-

ತುಮ್ಹಾರಾ ಜವಾನಾ ಹಮಾರಾಗ್ರಹಾರೇ
ಕದಾಪೀಹ ಮುಷ್ಕಿಲ್ ಸದಾ ತತ್ಪರಾ ವೈ ।
ಹುಕುಂ ದೀಯತಾಂ ನೋ ಹಕೀಂ ಚಾಪಿ ದದ್ಯಾತ್
ಖುದಾ ತೇ ಮುದಾಯಾಸ್ತು ನೈಜಾಮಭೂಪ ॥

ಆಂಧ್ರದ ತೆಲಂಗಾಣಾ ಪ್ರಾಂತವು ನೈಜಾಮವಂಶದ ಮುಸ್ಲಮಾನರಿಗೆ ಅಧೀನವಾಗಿದ್ದಾಗ ಉರ್ದೂಭಾಷೆಯೇ ಆಡಳಿತದ ಮುಖ್ಯಮಾಧ್ಯಮ ವಾಯಿತು. ಈ ಭಾಷೆಯನ್ನರಿಯದ ತೆಲುಗರಿಗೂ, ವಿಶೇಷತಃ ಇದು 'ಯಾವನೀವಾಣ'ಯೆಂಬ ಮಡಿವಂತಿಕೆಯಿಂದಿದ್ದ ಬ್ರಾಹ್ಮಣರಿಗೂ ತಮ್ಮ ಆದಷ್ಟೋ ಪ್ರಭುತ್ವಸಂಬಂಧಿತ ವ್ಯವಹಾರಗಳನ್ನು ನಡೆಸಲು ಕಷ್ಟವಾಯಿತು. ಅದರಲ್ಲಿಯೂ ಅಗ್ರಹಾರಗಳಲ್ಲಿ ನಿರಾತಂಕವಾಗಿ ವಾಸಿಸುತ್ತಿದ್ದ ವೈದಿಕರಿಗೆ ತುಂಬ ತೊಂದರೆಗಳಾದವು. ಈ ಕರ್ಮಠರ ಮಡಿ-ಮೈಲಿಗೆಗಳ ವಿವಕ್ಷೆಯಿಲ್ಲದೆ ಕಂದಾಯ-ಕರಗಳ ವಸೂಲಿಗೆ ಬರುವ ಮುಸ್ಲಿಂ ಭಟರು, ಅಧಿಕಾರಿಗಳು ನುಗ್ಗಲಾರದ ತುತ್ತಾದರು. ಅಲ್ಲದೆ ವೈದ್ಯಕೀಯ ಸೌಲಭ್ಯವೂ ಬೇಕಾಗಿದ್ದಿತು. ಈ ಸಂದರ್ಭದಲ್ಲಿ ನಿಜಾಮಪ್ರಭುಗಳ ಮನಸ್ಸಿಗೆ ಬರುವಂತೆ ಸಂಸ್ಕೃತದಲ್ಲಿ ಹಲವಾರು ಉರ್ದೂಶಬ್ದಗಳನ್ನು ಸೇರಿಸಿ 'ಮಣಿಪ್ರವಾಳ' ಶೈಲಿಯ ಮೇಲಣ ಭುಜಂಗಪ್ರಯಾತವೃತ್ತದ ಅಹವಾಲು ಅರ್ಜಿಯನ್ನು ಜಾಣನೊಬ್ಬ ಅಗ್ರಹಾರಿಕರ ಪರವಾಗಿ ಸಲ್ಲಿಸಿದ,

"ನಿಮ್ಮ ಸೇವಕರು ಯಾವಾಗಲೆಂದರಾವಾಗ ನಮ್ಮ ಅಗ್ರಹಾರಗಳಲ್ಲಿ ಕಷ್ಟಗಳ ದಂಡನೆ ಕೊಡುತ್ತಿದ್ದಾರೆ ! ಅವರಿಗೆ ಯೋಗ್ಯವಾದ ಆಜ್ಞೆಗಳನ್ನು ಕೊಡಿರಿ. ನಮ್ಮಲ್ಲಿ ವೈದ್ಯರಿಲ್ಲ, ವೈದ್ಯರನ್ನೂ ಏರ್ಪಡಿಸಿರಿ. ಖುದಾ ನಿಮಗೆ ಸದಾ ಸಂತೋಷವನ್ನು ಕೊಡಲಿ"

ಪವಿತ್ರವಸ್ತು ಸಂಸರ್ಗದಿಂದ ಇತರವಸ್ತುಗಳೂ ಪೂತವಾಗುತ್ತವೆಂಬ ತತ್ತ್ವವನ್ನನುಸರಿಸಿ 'ಆರ್ಯವಾಣಿ'ಯಿಂದ 'ಮ್ಲೇಚ್ಛವಾಣಿ'ಯೂ ಮಾಂಗಲಿಕ ವಾಗುವುದೆಂದು ಈ ಪದ್ಯದ ಕರ್ತೃ ನಂಬಿದ್ದಿರಬೇಕು. ನಮಗಂತೂ ಇಂದು ಇದು ಸೌಹಾರ್ದದ, ಸ್ವಾರಸ್ಯದ ಚೆಲುಮೆಯಾಗಿದೆ.

—o—

## –: ಗ್ರಂಥಋಣ :–

ಇಲ್ಲಿರುವ ಹಲವು ಗ್ರಂಥಗಳ ಆವೃತ್ತಿ, ಪ್ರಕಾಶನ ಸಂಸ್ಥೆ, ಪ್ರಕಾಶಿತಾವಧಿಯೇ ಮೊದಲಾದುವು ತಿಳಿಯದಿದ್ದುದರಿಂದಲೂ, ಮತ್ತೆ ಕೆಲವು ಕೇವಲ ನೆನಪಿನಲ್ಲಿದ್ದ ಪದ್ಯಗಳಿಗೆ ಆಕರಗಳೆಂದು ಶೀರ್ಷಿಕಾಮಾತ್ರ ವೇದ್ಯವಾಗಿದ್ದುದರಿಂದಲೂ ಏಕರೂಪ್ಯಕ್ಕಾಗಿ ಎಲ್ಲ ಗ್ರಂಥಗಳ ಶೀರ್ಷಿಕೆ ಮತ್ತು ಲೇಖಕರ ಹೆಸರುಗಳನ್ನು ಮಾತ್ರ ಕೊಡಲಾಗಿದೆ.

### ಸಂಸ್ಕೃತ :–

1) ಅದ್ವೈತ ಸಿದ್ಧಿ—ಮಧುಸೂದನ ಸರಸ್ವತೀ.
2) ಅಪ್ಪಯ್ಯ ದೀಕ್ಷಿತಚರಿತಂ—(ಸಂ)
3) ಉನ್ಮತ್ತ ಕೀಚಕಂ—ಕೆ.ಎಸ್. ನಾಗರಾಜನ್.
4) ಕವಿಕಂಠಾಭರಣಂ—ಕ್ಷೇಮೇಂದ್ರ.
5) ಕಿರಾತಾರ್ಜುನೀಯಂ—ಭಾರವಿ.
6) ಕೋಕಿಲದೂತಂ—ಉದ್ದಂಡ.
7) ಗೌರೀದಿಗಂಬರ ಪ್ರಹಸನಂ—ಶಂಕರಮಿಶ್ರ.
8) ನೈಷಧೀಯಚರಿತಂ—ಶ್ರೀಹರ್ಷ.
9) ಪಂಡಿತರಾಜಕಾವ್ಯಸಂಗ್ರಹ—(ಸಂ)
10) ಪಾದುಕಾಸಹಸ್ರಂ—ವೇಂಕಟನಾಥ.
11) ಭರ್ತೃಹರಿಶತಕತ್ರಯಂ—(ಸಂ)
12) ಮಹಿಷಶತಕಂ—ವಾಂಛೇಶ್ವರ (ಕುಟ್ಟಿಕವಿ).
13) ವಾಸಿಷ್ಠವೈಭವಂ—ಕಪಾಲಿಶಾಸ್ತ್ರಿ.

14) ಶೃಂಗಾರ ಪ್ರಕಾಶಃ—ಭೋಜರಾಜ.
15) ಶ್ರೀಕಂಠಚರಿತಂ—ಮಂಖ.
16) ಸಮಯೋಚಿತಪದ್ಯಮಾಲಿಕಾ—(ಸಂ)
17) ಸೀತಾರಾವಣ ಸಂವಾದಝರೀ ಭಾಗ I ಮತ್ತು II
—ಚ. ರಾಮಶಾಸ್ತ್ರಿ, ಸೀತಾರಾಮಶಾಸ್ತ್ರಿ.

## ಕನ್ನಡ :-

1) ಜ್ಞಾಪಕಚಿತ್ರಶಾಲೆ (ಸಂಪುಟ ೧)—ಡಿ.ವಿ.ಜಿ.
2) ತೀನಂಶ್ರೀ—ದೇ.ಜ.ಗೌ.
3) ಬಿಡಿಮುತ್ತು—ತೀ.ನಂ.ಶ್ರೀ.
4) ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದ ಮೂವರು ಸಂಸ್ಕೃತ
ವಿದ್ವಾಂಸರು—ಟಿ.ವಿ.ವೇಂಕಟಾಚಲಶಾಸ್ತ್ರಿ.
5) ರಸೋಲ್ಲಾಸ—ಕೆ. ಕೃಷ್ಣಮೂರ್ತಿ.
6) ವಾಗ್ಗೇಯಕಾರ ವಾಸುದೇವಾಚಾರ್ಯ—ಎಸ್. ಕೃಷ್ಣಮೂರ್ತಿ.
7) ಸಂಜೆಗಣ್ಣನ ಹಿನ್ನೋಟ—ಎ.ಎನ್. ಮೂರ್ತಿರಾವ್.
8) ಸಂಸ್ಕೃತಕವಿ ಚರಿತ್ರೆ (ಭಾಗ II)—ಎಂ.ಎನ್. ಶ್ರೀನಿವಾಸಅಯ್ಯಂಗಾರ್.
9) ಸಂಸ್ಕೃತ ಸಾಹಿತ್ಯಚರಿತ್ರೆ—ಬಲದೇವ ಉಪಾಧ್ಯಾಯ
(ಅನು.) ಎಸ್. ರಾಮಚಂದ್ರಶಾಸ್ತ್ರಿ.

## ತೆಲುಗು :-

1) ಅವಧಾನವಿದ್ಯ—ಸಿ.ವಿ. ಸುಬ್ಬಣ್ಣ.
2) ಆಂಧ್ರಮಹಾಭಾರತಮು—ತಿಕ್ಕನಸೋಮಯಾಜಿ.
3) ಕವಿಸಾರ್ವಭೌಮುಡು—ನೋರಿ. ನರಸಿಂಹಶಾಸ್ತ್ರಿ.

4) ಕಿರೀಟಿ ವೇಂಕಟಾಚಾರ್ಯುಲು—ಬಿ. ರಾಮರಾಜು.
5) ಚಾಟುಪದ್ಯ ಮಣಿಮಂಜರಿ (ಭಾಗ I ಮತ್ತು II)
—ವೇಟೂರಿ ಪ್ರಭಾಕರಶಾಸ್ತ್ರಿ.
6) ತಲುಗುಲೋ ಚಾಟುಕವಿತ್ವಮು—ಜಿ. ಲಲಿತ.
7) ಪಿಸುಪಾಟಿ ಚಿದಂಬರಶಾಸ್ತ್ರಿ ಅವಧಾನ ಪದ್ಯಮಾಲ
—(ಸಂ)ಪೋತಕುಚ್ಚಿ ಸುಬ್ರಹ್ಮಣ್ಯಶಾಸ್ತ್ರಿ.
8) ಮಧುರವಾಣಿ—ದಿಟ್ಟಕವಿ ಶ್ಯಾಮಲಾದೇವಿ.
9) ಮಲ್ಲಿನಾಥಸೂರಿ–ದೇಶಕಾಲಮು—ಬೃಂದಾವನ ರಾಮಾನುಜಾಚಾರ್ಯ,
ಜಿ. ಶಂಕರರಾವ್.

## ಇಂಗ್ಲೀಷ್ :—

1) History of Sanskrist Literature
—K. Krishnamacharya.
2) Contribution of Kerala to Sanskrit Litcrature.
—K. Kunjunni Raja.

## ಹಿಂದೀ :—

1) ಸಂಸ್ಕೃತ ಸಾಹಿತ್ಯಕೋಶ್—ರಾಜವಂಶ್ ಸಹಾಯ್ ಹೀರಾ.

## ಮಲಯಾಳ :—

1) ಕೇರಳ ಸಾಹಿತ್ಯಚರಿತಂ ಚರ್ಚಯುಂ ಪೂರಣವುಂ
—ವಟ್ಟಕ್ಕುಂಕೂರ್ ರಾಜರಾಜವರ್ಮ ರಾಜ.

## ಮರಾಠಿ :—

1) ಅರ್ವಾಚೀನ ಸಂಸ್ಕೃತ ಸಾಹಿತ್ಯ—ಎಸ್.ಬಿ.ವರ್ಣೇಕರ್.

## ತಮಿಳು :—

1) ಮಹಾಮಹಮೂಂ ಗೋವಿಂದ ದೀಕ್ಷಿತರುಂ
—(ಸಂಕಲಿತಗ್ರಂಥ : ಸಂಪಾದಕರ ಹೆಸರಿಲ್ಲ)

## ಪ್ರಾಕೃತ :—

1)ವಜ್ಜಾಲಗ್ಗಂ (ಉಪೋದ್ಘಾತ)—ಜಯವಲ್ಲಭ.

# ಒಪ್ಪೋಲೆ

| ಪುಟ | ಪಂಕ್ತಿ | ತಪ್ಪು | ಸರಿ |
|---|---|---|---|
| 4 | 9 | ತ್ರಿಲೇಬ್ಬು | ತೃಲೇಬ್ಬು |
| 7 | 16 | ಅಜ್ಞಾನ | ಅಜ್ಞಾತ |
| 7 | 18 | ಸಾರ್ಥಕ | ಸಾಫಲ್ಯ |
| 12 | 9 | ಪುಂಡಾಟಿ | ಪುಂಡಾಟ |
| 13 | 23 | ತರಬೇಕೆಂದೂ | ತರಬೇಕೆಂದು |
| 15 | 3 | ಯೋಗ | ಭೋಗ |
| 17 | 8 | ಒಡೆವೆ | ಒಡೆದವೆ |
| 18 | 9 | ತಸ್ತ್ರತ್ಯಾಃ | ಸ್ತ್ರತ್ಯಾ। |
| 18 | 16 | ತ-ಳ್ಳುಮಣೆ | -ತಳ್ಳುಮಣೆ |
| 24 | 8 | ಗಾಧೆ | ಗಾಥೆ |
| 24 | 12 | ಪತಿತೆಯಾದೆ | ಪತಿತೆಯಾದ |
| 25 | 4 | ಅಭ್ಯಸಿಸಿದ್ದಳೆಳೆಂದು | ಅಭ್ಯಸಿಸಿದ್ದಳೆಂದು |
| 29 | 9 | ಮಾವನ್ನು | ಮಾವನು |
| 29 | 15 | ಏರಿತು | ಏರಿತ |
| 30 | 18 | ಕಂಪಿತನಾಗಿ | ಕುಪಿತನಾಗಿ |
| 30 | 20 | ದೊಷ | ದೋಷ |
| 38 | 9 | ಪ್ರತೀಟನಿ ಪತತ್ಯಬ್ಧೌ | ಪ್ರತೀಟನಿಪತತ್ಯಬ್ಧೌ |
| 42 | 19 | ಅಗ್ರಾಹಾರ | ಅಗ್ರಹಾರ |

| ಪುಟ | ಪಂಕ್ತಿ | ತಪ್ಪು | ಸರಿ |
|---|---|---|---|
| 45 | 9 | ಮೆಟಿಕೊಳ್ಳುವುದೂ | ಮೆಟ್ಟಿಕೊಳ್ಳುವುದೂ |
| 46 | 2 | ತುಷ್ಯತಾಂ | ತುಷ್ಯತಾತ್ |
| 48 | 2 | ಪೌಢವೇ | ಪ್ರೌಢವೇ |
| 48 | 4 | ಹರಗು | ಬೆರಗು |
| 50 | 9 | ತರ್ಕವನೋದಿದರೆ | ತರ್ಕವನ್ನೋದಿದರೆ |
| 55 | 9 | ದಂತೆಯೇ | ದ್ದಂತೆಯೇ |
| 57 | 16 | ರೋಕ್ತಿ ಮಪಿದನ್ನಪಿ | ರೋಕ್ತಿಮಪಿದನ್ನಪಿ |
| 59 | 3 | ರಮಸೇ | ರಮತೇ |
| 61 | 10 | ವ್ಯಾಕಣ | ವ್ಯಾಕರಣ |
| 62 | 6 | ಅಟ್ಟಹ್ರಾಸ | ಅಟ್ಟಹಾಸ |
| 64 | 5 | ಅಲ್ಲಸಾನಿ | ಅಲ್ಲಸಾನಿ |
| 72 | 6 | ಅಳತಗೋಲು | ಅಳತೆಗೋಲು |
| 73 | 12 | ಸಾ ಕ್ಷಾದಿವ | ಸಾಕ್ಷಾದಿವ |
| 73 | 15 | ಷಟ್ಯಾಸ್ತ್ರ | ಷಟ್ಶಾಸ್ತ್ರ |
| 73 | 15 | ಛಾಂದಸ | ಚ್ಛಾಂದಸ |
| 74 | 1 | ಕವತಾ | ಕವಿತಾ |
| 74 | 7 | ದ್ವಿಯ | ದ್ವಿತೀಯ |
| 75 | 2 | ಅನುಧವ | ಅನುಭವ |
| 84 | 14 | ತುರಗಮುರ | ತುರಗಖುರ |
| 85 | 14 | ಅದನ್ನು | ಅದನ್ನು |
| 96 | 21 | ಸ್ವ ಂತಿಕೆಯು | ಸ್ವಂತಿಕೆಯ |

| ಪುಟ | ಪಂಕ್ತಿ | ತಪ್ಪು | ಸರಿ |
|---|---|---|---|
| 97 | 12 | ಪ್ರಭುಗಳೇ | ಪ್ರಭುಗಳಿಂದಲೇ |
| 102 | 2 | ಮರ್ದಿಸಿದನು | ಮರ್ದಿಸಿದವನು |
| 102 | 7 | ರೀಜತೋ | ರಂ-ಜತೋ |
| 105 | 18 | ಅಪವಾಕ್ಯಾಭ್ಯಾಸ | ಅಪವಾಕ್ಯಾಭ್ಯಾಸ |
| 111 | 11 | ಕಾಲಕ್ಕೀ | ಕಾಲಕ್ಕೆ |
| 113 | 1 | ದ್ಗಾಡೋಹ | ದ್ಗಾಡೋsಹ |
| 113 | 12 | ಪಟ್ಟಪ್ಪ | ಪಟಪ್ಪ |
| 120 | 8 | ಪುರುರೇ | ಪುರಾರೇ |
| 122 | 11 | ಎಂಬಲ್ಲಿ) | ಎಂಬಲ್ಲಿ |
| 126 | 19 | ಅನುಕರಣ | ಅನುಕರಣ. |
| 129 | 2 | ಪೇಖರ | ಶೇಖರ |
| 131 | 10 | ಚಟರ್ಜಿಯರು | ಚಟರ್ಜಿಯವರು |
| 188 | 2 | ಅನ್ವಯ | ಅನ್ವಯ |
| 138 | 18 | ಕೃತ್ರಿಮೋದ್ಘಾಟವನ್ನು | ಕೃತ್ರಿಮೋದ್ಘಾಟನವನ್ನು |
| 138 | 20 | ಅನ್ವಯಿಸುವಂತೆ | ಅನ್ವಯಿಸುವಂತೆ |
| 142 | 20 | ಕಥೆಗಳೆಷ್ಟೋ: | ಕಥೆಗಳೆಷ್ಟೋ |
| 144 | 1 | ಬದ್ಧಿದ್ದ | ಬದ್ಧಿದ್ದ |

ಅಕ್ಷರಶಃ ನೂರಾರು ಸ್ವಾರಸ್ಯಪೂರ್ಣ ಸಂಸ್ಕೃತ ಶ್ಲೋಕಗಳನ್ನು ವಿಸ್ತೃತವಾದ ಸಾಹಿತ್ಯರಾಶಿಯಿಂದ ಸಂಗ್ರಹಿಸಿ ಅವುಗಳಲ್ಲಿ ಪ್ರತಿಯೊಂದರ ರಚನೆಯ ಹಿಂದಿರುವ ರೋಚಕವಾದ ಹಾಸ್ಯ-ಚಮತ್ಕಾರ-ವಿಷಾದ-ವಿಲಾಸಗಳ ಸೆಲೆಯಿರುವ ಕಥೆಗಳನ್ನು ಹೊಂದಿಸಿ ತನ್ಮೂಲಕ ಆಯಾ ಕವಿತೆಗಳ ಸೊಗಸನ್ನು ಮನದಟ್ಟು ಮಾಡಿಕೊಡುವ ವಿನೂತನ ಯತ್ನವೇ 'ಕವಿತೆಗೊಂದು ಕಥೆ' ಇದರಲ್ಲಿ ಅಜ್ಞಾತ ಕವಿಗಳ ಚಾಟು ಶ್ಲೋಕಗಳಿಗೆ; ಪ್ರಾಚೀನರ, ನವೀನರ, ಪ್ರಸಿದ್ಧರ, ಅಪ್ರಸಿದ್ಧರ ವಿಶಿಷ್ಟ ಸಂದರ್ಭ ನಿರ್ಭರವಾದ ಪದ್ಯಗಳಿಗೆ; ಸಮಸ್ಯಾ ಪೂರಣಗಳಿವೆ. ಕೇವಲ ಹಳೆಯ ತಲೆಮಾರಿನ ವಿದ್ವದ್ರಸಿಕರಲ್ಲಿ ಮೌಖಿಕವಾಗಿ ಪ್ರಚಲಿತವಾಗಿದ್ದು ಈಚೆಗೆ ಮರೆತು ಹೋಗುತ್ತಿರುವ ಇಂಥ ಕವಿತಾ ಕಥೆಗಳನ್ನು ಒಂದೆಡೆ ದಾಖಲಿಸಿ ಸಹೃದಯರಿಗೆ ವಿಶಿಷ್ಟ ರೀತಿಯ ಆನಂದವನ್ನುಂಟು ಮಾಡುವ ಪ್ರಕೃತ ಕಾರ್ಯ ರಮಣೀಯ ಶ್ಲೋಕಗಳ ಹಿಂದಿರುವ ಸ್ಮರಣೀಯ ಸಂದರ್ಭಗಳ ಸುಮಮಾಲೆಯಾಗಿ ಬಹುಕಾಲ ರಂಜಿಸಲಿದೆ.

ಮೂಲ ಶ್ಲೋಕ, ಅದರ ಒಳಗನ್ನಡ ಭಾಷಾಂತರ ಹಾಗೂ ಲವಲವಿಕೆಯ ಗದ್ಯದಲ್ಲಿ ಅದರ ರಚನೆಯನ್ನು ಕುರಿತು ಪರಂಪರೆಯಾಗಿ ಬಂದ ಐತಿಹ್ಯ - ಕಥೆಗಳ ನಿರೂಪಣೆ ಈ ಕೃತಿಯ ಹೂರಣ.



